# ಕರ್ನಾಟಕ ರಾಜ್ಯಪತ್ರ

ಅಧಿಕೃತವಾಗಿ ಪ್ರಕಟಿಸಲಾದುದು

| ಸಂಪುಟ ೧೫೧<br>Volume 151 | ಬೆಂಗಳೂರು, ಗುರುವಾರ, ಆಗಸ್ಟ್ ೪, ೨೦೧೬ (ಶ್ರಾವಣ ೧೩, ಶಕ ವರ್ಷ ೧೯೩೮)<br>Bengaluru, Thursday, August 4, 2016 ( Shravana 13, Shaka Varsha 1938) | ಸಂಚಿಕೆ ೩೧<br>Issue 31 |
|---|---|---|


## ಭಾಗ ೩

## ಸರ್ಕಾರದ ಆಯಾ ಇಲಾಖೆಗಳ ಮುಖ್ಯಸ್ಥರ ಮತ್ತು ಸ್ಥಳೀಯ ಪ್ರಾಧಿಕಾರಿಗಳಿಗೆ ಸಂಬಂಧಿಸಿದ ಅಧಿಸೂಚನೆಗಳು

**ಸಹಕಾರ ಇಲಾಖೆ**

**ಸಹಕಾರ ಸಂಘಗಳ ಉಪ ನಿಬಂಧಕರು, ಮಿನಿ ವಿಧಾನ ಸೌಧ, ಕೊಠಡಿ ಸಂಖ್ಯೆ 305, 2ನೇ ಮಹಡಿ, ತುಮಕೂರು ಜಿಲ್ಲೆ, ತುಮಕೂರು ಇವರ ಕಾರ್ಯಾಲಯದ ನಡವಳಿಕೆಗಳು**

**ವಿಷಯ :** ಸಮಾಪನೆಗೊಂಡಿರುವ ಹಾಲು ಉತ್ಪಾದಕರ ಮಹಿಳಾ ಸಹಕಾರ ಸಂಘ ನಿ., ಸೋಗೇನಹಳ್ಳಿ, ಮಧುಗಿರಿ ತಾಲ್ಲೂಕು ಈ ಸಂಘವನ್ನು ಪುನಶ್ಚೇತನಗೊಳಿಸುವ ಬಗ್ಗೆ.

**ಉಲ್ಲೇಖ :** 1) ಸಹಕಾರ ಸಂಘಗಳ ಸಹಾಯಕ ನಿಬಂಧಕರು, ಮಧುಗಿರಿ ಉಪ ವಿಭಾಗ, ಮಧುಗಿರಿ ಇವರ ಪತ್ರ ಸಂಖ್ಯೆ: ಸನಿ33/ಎಂಕೆಟಿ/ಸಮಾಪನೆ/ಪು.ಶ್ಚೇ/2015–16, ದಿನಾಂಕ: 29–03–2016.

2) ಈ ಕಛೇರಿಯ ಸಮಾಪನಾ ಆದೇಶ ಸಂಖ್ಯೆ: ಡಿಆರ್‌ಟಿ/ಎಲ್‌ಕ್ಯೂಡಿ/ಸಿ.ಆರ್–138/2011–12, ದಿನಾಂಕ: 29–02–2012.

3) ಸದಸ್ಯರ ಮನವಿ ದಿನಾಂಕ: 16–03–2016.

**ಪ್ರಸ್ತಾವನೆ :**

ಸಮಾಪನೆಗೊಂಡಿರುವ ಹಾಲು ಉತ್ಪಾದಕರ ಮಹಿಳಾ ಸಹಕಾರ ಸಂಘ ನಿ., ಸೋಗೇನಹಳ್ಳಿ, ಮಧುಗಿರಿ ತಾಲ್ಲೂಕು, ತುಮಕೂರು ಜಿಲ್ಲೆ ಈ ಸಮಾಪನಾ ಸಂಘವನ್ನು ಉಲ್ಲೇಖ (1)ರ ಪತ್ರದಲ್ಲಿ ಸಹಕಾರ ಸಂಘಗಳ ಸಹಾಯಕ ನಿಬಂಧಕರು, ಮಧುಗಿರಿ ಉಪ ವಿಭಾಗ, ಮಧುಗಿರಿರವರು ಸದಸ್ಯರ ಆಸಕ್ತಿ ಹಾಗೂ ಸಮಾಪನಾಧಿಕಾರಿಯವರ ಕೋರಿಕೆಯ ಮೇರೆಗೆ ಸಮಾಪನಾ ಸಂಘವನ್ನು ಪುನಶ್ಚೇತನಗೊಳಿಸಿಕೊಡುವಂತೆ ಶಿಫಾರಸ್ಸು ಮಾಡಿರುತ್ತಾರೆ.

ಉಲ್ಲೇಖ (1)ರ ಪ್ರಸ್ತಾವನೆಯನ್ನು ಪರಿಶೀಲಿಸಲಾಗಿ, ಸದರಿ ಸಹಕಾರ ಸಂಘವು ಬೈಲಾ ರೀತ್ಯಾ ಕಾರ್ಯನಿರ್ವಹಿಸದೇ ಸ್ಥಗಿತಗೊಂಡ ಹಿನ್ನೆಲೆಯಲ್ಲಿ ಉಲ್ಲೇಖ (2)ರ ಈ ಕಛೇರಿ ಆದೇಶದಲ್ಲಿ ಸಮಾಪನಗೊಳಿಸಿ, ಮಾರಾಟಾಧಿಕಾರಿ, ಸಹಕಾರ ಸಂಘಗಳ ಸಹಾಯಕ ನಿಬಂಧಕರ ಕಛೇರಿ, ಮಧುಗಿರಿ ಉಪವಿಭಾಗ, ಮಧುಗಿರಿ ಇವರನ್ನು ಸಮಾಪನಾಧಿಕಾರಿಯಾಗಿ ನೇಮಕ ಮಾಡಲಾಗಿರುತ್ತದೆ. ಸಮಾಪನಾ ಸಂಘವು, ಸಹಕಾರ ಸಂಘಗಳ ಸಹಾಯಕ ನಿಬಂಧಕರು, ಮಧುಗಿರಿ ಉಪ ವಿಭಾಗ ಇವರಿಂದ ನೋಂದಣಿ ಸಂಖ್ಯೆ: ಸನಿ–33/ಎಂಕೆಟಿ/ಜೆಒಕ್ಯೂ/37031/2008–09, ದಿನಾಂಕ: 31–05–2008ರಲ್ಲಿ ನೋಂದಣಿಯಾಗಿ ತಾಲ್ಲೂಕು ಮಟ್ಟಕ್ಕಿಂತ ಕಡಿಮೆ ಕಾರ್ಯವ್ಯಾಪ್ತಿಯನ್ನು ಹೊಂದಿರುತ್ತದೆ.

ಉಲ್ಲೇಖ (3)ರ ರೀತ್ಯಾ ಸಂಘದ ಸದಸ್ಯರು ಸಂಘವನ್ನು ಪುನಶ್ಚೇತನಗೊಳಿಸಿಕೊಡಲು ಮನವಿ ಸಲ್ಲಿಸಿದ್ದರ ಹಿನ್ನೆಲೆಯಲ್ಲಿ ಸಮಾಪನಾಧಿಕಾರಿಯವರು ಸ್ಥಳ ಪರಿಶೀಲನೆ ಮಾಡಿ ಸಂಘವು ಪುನಶ್ಚೇತನಗೊಂಡ ನಂತರ ಸಮರ್ಪಕವಾಗಿ ಕಾರ್ಯನಿರ್ವಹಿಸುವ ಬಗ್ಗೆ ಸಾಧ್ಯತಾ ವರದಿ ಹಾಗೂ ಸಮಾಪನಾಧಿಕಾರಿಯವರ ನಡವಳಿಗಳನ್ನು ಸಲ್ಲಿಸಿರುತ್ತಾರೆ.

ಸದಸ್ಯರುಗಳ ಆರ್ಥಿಕ ಅಭಿವೃದ್ಧಿ ದೃಷ್ಟಿಯಿಂದ ಹಾಗೂ ಸಂಘದ ಮುಖಾಂತರ ಹಾಲು ಉತ್ಪಾದಕ ಸದಸ್ಯರಿಗೆ ಸರ್ಕಾರದ ಸೌಲಭ್ಯಗಳನ್ನು ಒದಗಿಸುವ ದೃಷ್ಟಿಯಿಂದ, ಆರ್ಥಿಕವಾಗಿ ಅಭಿವೃದ್ಧಿ ಹೊಂದುವ ಸಲುವಾಗಿ ಈ ಸಂಘವನ್ನು ಪುನ:ಶ್ಚೇತನಗೊಳಿಸಿ ಆಡಳಿತ ಮಂಡಳಿ ರಚನೆಗೆ ಸದಾವಕಾಶ ಮಾಡಿಕೊಡಬೇಕೆಂದು ಉಲ್ಲೇಖ (1)ರ ಪತ್ರದಲ್ಲಿ ಸಹಾಯಕ ನಿಬಂಧಕರು, ಮಧುಗಿರಿ ಇವರು ಪುನ:ಶ್ಚೇತನಗೊಳಿಸಿ ಆದೇಶಿಸಲು ಕೋರಿ ಪ್ರಸ್ತಾವೆ ಸಲ್ಲಿಸಿರುವ ಹಿನ್ನೆಲೆಯಲ್ಲಿ ಸದಸ್ಯರ ಹಿತದೃಷ್ಟಿಯಿಂದ ಸಂಘವನ್ನು ಪುನ:ಶ್ಚೇತನಗೊಳಿಸುವುದು ಸೂಕ್ತವೆಂದು ಅಭಿಪ್ರಾಯಪಡುತ್ತಾ ಈ ಕೆಳಕಂಡಂತೆ ಆದೇಶ ಹೊರಡಿಸಲಾಗಿದೆ.

: ಆದೇಶ :

**ಸಂಖ್ಯೆ: ಡಿಆರ್‌ಟಿ:ಎಲ್‌ಕ್ಯೂಡಿ:138: ಪುನ:ಶ್ಚೇತನ:2011–12, ದಿನಾಂಕ: 31–03–2016**

ಪ್ರಸ್ತಾವನೆಯಲ್ಲಿ ವಿವರಿಸಿರುವ ಅಂಶಗಳ ಹಿನ್ನೆಲೆಯಲ್ಲಿ ಹಾಗೂ ಕರ್ನಾಟಕ ಸಹಕಾರ ಸಂಘಗಳ ಕಾಯ್ದೆ, 1959ರ ಕಲಂ 72(3) ಹಾಗೂ ಸರ್ಕಾರದ ಅಧಿಸೂಚನೆ ಸಂಖ್ಯೆ: ಸಿಒ/139/ಸಿ.ಎಲ್‌ಎಂ:2010, ದಿನಾಂಕ: 17–02–2011ರನ್ವಯ ದತ್ತವಾಗಿರುವ ಅಧಿಕಾರವನ್ನು ಚಲಾಯಿಸಿ, ಜಿ.ಪ್ರಕಾಶ್, ಸಹಕಾರ ಸಂಘಗಳ ಉಪ ನಿಬಂಧಕರು, ತುಮಕೂರು ಜಿಲ್ಲೆ, ತುಮಕೂರು ಆದ ನಾನು, ಸಮಾಪನೆಗೊಂಡಿರುವ ಹಾಲು ಉತ್ಪಾದಕರ ಮಹಿಳಾ ಸಹಕಾರ ಸಂಘ ನಿ., ಸೋಗೇನಹಳ್ಳಿ, ಮಧುಗಿರಿ ತಾಲ್ಲೂಕು, ತುಮಕೂರು ಜಿಲ್ಲೆ ಈ ಸಹಕಾರ ಸಂಘವನ್ನು ಕರ್ನಾಟಕ ಸಹಕಾರ ಕಾಯ್ದೆ, 1959 ಕಲಂ 72ರನ್ವಯ ಸಮಾಪನೆಗೊಳಿಸಿ ಹೊರಡಿಸಿರುವ ಈ ಕಛೇರಿಯ ಆದೇಶ ಸಂಖ್ಯೆ: ಡಿಆರ್‌ಟಿ:ಎಲ್‌ಕ್ಯೂಡಿ:138/2011–12, ದಿನಾಂಕ: 29–02–2012ನ್ನು ಈ ಕೂಡಲೇ ಜಾರಿಗೆ ಬರುವಂತೆ ರದ್ದುಪಡಿಸಿ, ಸಮಾಪನೆಗೊಂಡಿರುವ ಹಾಲು ಉತ್ಪಾದಕರ ಮಹಿಳಾ ಸಹಕಾರ ಸಂಘ ನಿ., ಸೋಗೇನಹಳ್ಳಿ, ಮಧುಗಿರಿ ತಾಲ್ಲೂಕು ತುಮಕೂರು ಜಿಲ್ಲೆ, ಈ ಸಂಘವನ್ನು ಈ ಕೆಳಕಂಡ ಷರತ್ತಿಗೊಳಪಟ್ಟು ಪುನ:ಶ್ಚೇತನಗೊಳಿಸಿ ಆದೇಶಿಸಿರುತ್ತೇನೆ.

**ಷರತ್ತುಗಳು :–**

1. ಸಂಘವು ಪುನ:ಶ್ಚೇತನಗೊಂಡ ನಂತರ ಕಾರ್ಯಚಟುವಟಿಕೆಗಳನ್ನು ಆರಂಭಿಸತಕ್ಕದ್ದು ಮತ್ತು 6 ತಿಂಗಳೊಳಗೆ ಸಂಘದ ಷೇರು ಮೊಬಲಗನ್ನು ದ್ವಿಗುಣಗೊಳಿಸತಕ್ಕದ್ದು.
2. ಸಂಘದ ವಾರ್ಷಿಕ ಮಹಾಸಭೆಯನ್ನು ಪ್ರತಿವರ್ಷ ತಪ್ಪದೇ ನಿಗದಿತ ಅವಧಿಯೊಳಗೆ ನಡೆಸತಕ್ಕದ್ದು.
3. ಸಂಘದ ವಾರ್ಷಿಕ ಲೆಕ್ಕಪರಿಶೋಧನೆಯನ್ನು ಪ್ರತಿವರ್ಷ ತಪ್ಪದೇ ನಿಗದಿತ ಸಮಯದಲ್ಲಿ ನಡೆಸಲು ಕ್ರಮ ಕೈಗೊಳ್ಳುವುದು.
4. ಸಂಘದ ಆಡಳಿತ ಮಂಡಳಿ ಸದಸ್ಯರನ್ನು ಆಯ್ಕೆ ಮಾಡಲು ಜರೂರು ಚುನಾವಣಾ ಕ್ರಮ ಕೈಗೊಳ್ಳತಕ್ಕದ್ದು.
5. ಸಂಘದ ಲೆಕ್ಕಪುಸ್ತಕಗಳನ್ನು ಆಯಾಯ ದಿನವೇ ಬರೆಯತಕ್ಕದ್ದು.

ಈ ಆದೇಶವನ್ನು ನನ್ನ ಸ್ವಸಹಿ ಹಾಗೂ ಕಛೇರಿಯ ಮುದ್ರೆಯೊಂದಿಗೆ ದಿನಾಂಕ: 31–03–2016ರಂದು ನೀಡಿರುತ್ತೇನೆ.

**ಜಿ.ಪ್ರಕಾಶ್**
ಸಹಕಾರ ಸಂಘಗಳ ಉಪ ನಿಬಂಧಕರು
ತುಮಕೂರು ಜಿಲ್ಲೆ, ತುಮಕೂರು.

**P.R. 505**
**SC – 10**

## ಸಹಕಾರ ಇಲಾಖೆ

**ಸಹಕಾರ ಸಂಘಗಳ ಉಪ ನಿಬಂಧಕರು, ಮಿನಿ ವಿಧಾನ ಸೌಧ, ಕೊಠಡಿ ಸಂಖ್ಯೆ 305, 2ನೇ ಮಹಡಿ, ತುಮಕೂರು ಜಿಲ್ಲೆ, ತುಮಕೂರು ಇವರ ಕಾರ್ಯಾಲಯದ ನಡವಳಿಕೆಗಳು**

**ವಿಷಯ :** ಸಮಾಪನೆಗೊಂಡಿರುವ ಶ್ರೀ ರಂಗನಾಥ, ರೇಡಿಮೇಡ್ ಡ್ರೆಸ್ ಮೇಕರ್ಸ್ ಸಹಕಾರ ಸಂಘ ನಿ., ಚೇಳೂರು, ಗುಬ್ಬಿ ತಾಲ್ಲೂಕು, ತುಮಕೂರು ಜಿಲ್ಲೆ ಈ ಸಂಘವನ್ನು ಪುನ:ಶ್ಚೇತನಗೊಳಿಸುವ ಬಗ್ಗೆ.

**ಉಲ್ಲೇಖ :** 1) ಸಹಕಾರ ಸಂಘಗಳ ಸಹಾಯಕ ನಿಬಂಧಕರು, ತುಮಕೂರು ಉಪ ವಿಭಾಗ, ತುಮಕೂರು ಇವರ ಪತ್ರ ಸಂಖ್ಯೆ: ಸನಿ32/ಸಮಾಪನೆ/ಪುನ:ಶ್ಚೇತನ/ಸಿ.ಆರ್–02/2015–16, ದಿನಾಂಕ: 23–03–2016.

2) ಈ ಕಛೇರಿಯ ಸಮಾಪನಾ ಆದೇಶ ಸಂಖ್ಯೆ: ಡಿಆರ್‌ಟಿ:ಸಮಾಪನೆ:ಸಿಆರ್–172/2014–15, ದಿನಾಂಕ: 30–09–2014.

3) ಸದಸ್ಯರ ಮನವಿ ದಿನಾಂಕ: 23–03–2015 ಹಾಗೂ ದಿನಾಂಕ: 19–02–2016.

**ಪ್ರಸ್ತಾವನೆ :**

ಸಮಾಪನೆಗೊಂಡಿರುವ ಶ್ರೀ ರಂಗನಾಥ ರೇಡಿಮೇಡ್ ಡ್ರೆಸ್ ಮೇಕರ್ಸ್ ಸಹಕಾರ ಸಂಘ ನಿ., ಚೇಳೂರು, ಗುಬ್ಬಿ ತಾಲ್ಲೂಕು, ತುಮಕೂರು ಜಿಲ್ಲೆ, ಈ ಸಮಾಪನಾ ಸಂಘವನ್ನು ಉಲ್ಲೇಖ (1)ರ ಪತ್ರದಲ್ಲಿ ಸಹಕಾರ ಸಂಘಗಳ ಸಹಾಯಕ ನಿಬಂಧಕರು ತುಮಕೂರು ಉಪ ವಿಭಾಗ, ತುಮಕೂರುರವರು ಸಂಘವನ್ನು ಸದಸ್ಯರ ಆಸಕ್ತಿ ಹಾಗೂ ಸಮಾಪನಾಧಿಕಾರಿಯವರ ಕೋರಿಕೆಯ ಮೇರೆಗೆ ಸಮಾಪನಾ ಸಂಘವನ್ನು ಪುನ:ಶ್ಚೇತನಗೊಳಿಸಿಕೊಡುವಂತೆ ಶಿಫಾರಸ್ಸು ಮಾಡಿರುತ್ತಾರೆ.

ಉಲ್ಲೇಖ (1)ರ ಪ್ರಸ್ತಾವನೆಯನ್ನು ಪರಿಶೀಲಿಸಲಾಗಿ, ಸದರಿ ಸಹಕಾರ ಸಂಘವು ಬೈಲಾ ರೀತ್ಯಾ ಕಾರ್ಯನಿರ್ವಹಿಸದೇ ಸ್ಥಗಿತಗೊಂಡ ಹಿನ್ನೆಲೆಯಲ್ಲಿ ಉಲ್ಲೇಖ (2)ರ ಈ ಕಛೇರಿ ಆದೇಶದಲ್ಲಿ ಸಮಾಪನೆಗೊಳಿಸಿ, ಸಹಕಾರ ಅಭಿವೃದ್ಧಿ ಅಧಿಕಾರಿ, ಗುಬ್ಬಿ ತಾಲ್ಲೂಕು ಇವರನ್ನು ಸಮಾಪನಾಧಿಕಾರಿಯಾಗಿ ನೇಮಕ ಮಾಡಲಾಗಿರುತ್ತದೆ. ಸಮಾಪನಾ ಸಂಘವು, ಸಹಕಾರ ಸಂಘಗಳ ಸಹಾಯಕ ನಿಬಂಧಕರು, ತುಮಕೂರು ಉಪ ವಿಭಾಗ, ತುಮಕೂರು ಇವರಿಂದ ನೋಂದಣಿ ಸಂಖ್ಯೆ: ಎ ಆರ್ ಟಿ–32/1230/1965–66, ದಿನಾಂಕ: 29–01–1966ರಲ್ಲಿ ನೋಂದಣಿಯಾಗಿ ತಾಲ್ಲೂಕು ಮಟ್ಟಕ್ಕಿಂತ ಕಡಿಮೆ ಕಾರ್ಯವ್ಯಾಪ್ತಿಯನ್ನು ಹೊಂದಿರುತ್ತದೆ.

ಸಂಘದ ಸದಸ್ಯರು ಸಂಘವನ್ನು ಪುನ:ಶ್ಚೇತನಗೊಳಿಸಿಕೊಡಲು ಮನವಿ ಸಲ್ಲಿಸಿದ್ದರ ಹಿನ್ನೆಲೆಯಲ್ಲಿ ಸಮಾಪನಾಧಿಕಾರಿಯವರು ಸ್ಥಳ ಪರಿಶೀಲನೆ ಮಾಡಿ ಸಂಘವು ಪುನಶ್ಚೇತನಗೊಂಡ ನಂತರ ಸಮರ್ಪಕವಾಗಿ ಕಾರ್ಯನಿರ್ವಹಿಸುವ ಬಗ್ಗೆ ಸಾಧ್ಯತಾ ವರದಿ ಹಾಗೂ ಸಮಪನಾಧಿಕಾರಿಯವರ ನಡವಳಿಗಳನ್ನು ಸಲ್ಲಿಸಿರುತ್ತಾರೆ.

ಸಂಘದ ಕಾರ್ಯವ್ಯಾಪ್ತಿಯ ಸದಸ್ಯರು ದಿನಾಂಕ: 23–03–2015 ಮತ್ತು 19–02–2016ರಂದು ಸಂಘದ ಸದಸ್ಯರುಗಳು ಸಮಾಪನಾಧಿಕಾರಿಯವರಿಗೆ ಮನವಿ ಸಲ್ಲಿಸಿ, ಸದಸ್ಯರುಗಳ ಹಿತ ದೃಷ್ಟಿಯಿಂದ ಮತ್ತು ಆರ್ಥಿಕ ಅಭಿವೃದ್ಧಿ ದೃಷ್ಟಿಯಿಂದ ಹಾಗೂ ಸದಸ್ಯರಿಗೆ ಸರ್ಕಾರದ

ಸೌಲಭ್ಯಗಳನ್ನು ಒದಗಿಸುವ ದೃಷ್ಟಿಯಿಂದ ಈ ಸಂಘವನ್ನು ಪುನ:ಶ್ಚೇತನಗೊಳಿಸಿ ಆಡಳಿತ ಮಂಡಳಿ ರಚನೆಗೆ ಸದಾವಕಾಶ ಮಾಡಿಕೊಡಬೇಕೆಂದು ಕೋರಿಕೊಂಡ ಹಿನ್ನೆಲೆಯಲ್ಲಿ, ಉಲ್ಲೇಖ (1)ರ ಪತ್ರದಲ್ಲಿ ಸಹಾಯಕ ನಿಬಂಧಕರು, ಪುನ:ಶ್ಚೇತನಗೊಳಿಸಿ ಆದೇಶಿಸಲು ಕೋರಿ ಪ್ರಸ್ತಾವೆ ಸಲ್ಲಿಸಿದ ಹಿನ್ನೆಲೆಯಲ್ಲಿ ಸದಸ್ಯರ ಹಿತದೃಷ್ಟಿಯಿಂದ ಸಂಘವನ್ನು ಪುನ:ಶ್ಚೇತನಗೊಳಿಸುವುದು ಸೂಕ್ತವೆಂದು ಅಭಿಪ್ರಾಯ ಪಡುತ್ತಾ ಈ ಕೆಳಕಂಡಂತೆ ಆದೇಶ ಹೊರಡಿಸಲಾಗಿದೆ.

**: ಆದೇಶ :**

**ಸಂಖ್ಯೆ: ಡಿಆರ್‌ಟಿ:ಸಮಾಪನೆ: ಪುನ:ಶ್ಚೇತನ:172:2014–15, ದಿನಾಂಕ: 29–03–2016**

ಪ್ರಸ್ತಾವನೆಯಲ್ಲಿ ವಿವರಿಸಿರುವ ಅಂಶಗಳ ಹಿನ್ನೆಲೆಯಲ್ಲಿ ಹಾಗೂ ಕರ್ನಾಟಕ ಸಹಕಾರ ಸಂಘಗಳ ಕಾಯ್ದೆ, 1959ರ ಕಲಂ 72(3) ಹಾಗೂ ಸರ್ಕಾರದ ಅಧಿಸೂಚನೆ ಸಂಖ್ಯೆ: ಸಿಒ/139/ಸಿಎಲ್‌ಎಂ:2010, ದಿನಾಂಕ: 17–02–2011ರನ್ವಯ ದತ್ತವಾಗಿರುವ ಅಧಿಕಾರವನ್ನು ಚಲಾಯಿಸಿ, ಜಿ.ಪ್ರಕಾಶ್, ಸಹಕಾರ ಸಂಘಗಳ ಉಪ ನಿಬಂಧಕರು, ತುಮಕೂರು ಜಿಲ್ಲೆ, ತುಮಕೂರು ಆದ ನಾನು, ಶ್ರೀ ರಂಗನಾಥ ರೇಡಿಮೇಡ್ ಡ್ರೆಸ್ ಮೇಕರ್ಸ್, ಚೇಳೂರು, ಗುಬ್ಬಿ ತಾಲ್ಲೂಕು, ತುಮಕೂರು ಜಿಲ್ಲೆ ಈ ಸಹಕಾರ ಸಂಘವನ್ನು ಕರ್ನಾಟಕ ಸಹಕಾರ ಕಾಯ್ದೆ, 1959 ಕಲಂ 72ರನ್ವಯ ಸಮಾಪನೆಗೊಳಿಸಿ ಹೊರಡಿಸಿರುವ ಈ ಕಛೇರಿಯ ಆದೇಶ ಸಂಖ್ಯೆ: ಡಿಆರ್‌ಟಿ:ಸಮಾಪನೆ:ಸಿಆರ್–172/2014–15, ದಿನಾಂಕ: 30–09–2014 ಈ ಕೂಡಲೇ ಜಾರಿಗೆ ಬರುವಂತೆ ರದ್ದುಪಡಿಸಿ ಆದೇಶಿಸಿರುತ್ತೇನೆ ಹಾಗೂ ಶ್ರೀ ರಂಗನಾಥ ರೇಡಿಮೇಡ್ ಡ್ರೆಸ್ ಮೇಕರ್ಸ್, ಚೇಳೂರು, ಗುಬ್ಬಿ ತಾಲ್ಲೂಕು ಈ ಸಹಕಾರ ಸಂಘವನ್ನು ಈ ಕೆಳಕಂಡ ಷರತ್ತಿಗೊಳಪಟ್ಟು ಪುನ:ಶ್ಚೇತನಗೊಳಿಸಿ ಆದೇಶಿಸಿರುತ್ತೇನೆ.

**ಷರತ್ತುಗಳು :–**

1. ಸಂಘವು ಪುನ:ಶ್ಚೇತನಗೊಂಡ ನಂತರ ಕಾರ್ಯಚಟುವಟಿಕೆಗಳನ್ನು ಆರಂಭಿಸತಕ್ಕದ್ದು ಮತ್ತು 6 ತಿಂಗಳೊಳಗೆ ಸಂಘದ ಷೇರು ಮೊಬಲಗನ್ನು ದ್ವಿಗುಣಗೊಳಿಸತಕ್ಕದ್ದು.
2. ಸಂಘದ ವಾರ್ಷಿಕ ಮಹಾಸಭೆಯನ್ನು ಪ್ರತಿವರ್ಷ ತಪ್ಪದೇ ನಿಗಧಿತ ಅವಧಿಯೊಳಗೆ ನಡೆಸತಕ್ಕದ್ದು.
3. ಸಂಘದ ವಾರ್ಷಿಕ ಲೆಕ್ಕಪರಿಶೋಧನೆಯನ್ನು ಪ್ರತಿವರ್ಷ ತಪ್ಪದೇ ನಿಗಧಿತ ಸಮಯದಲ್ಲಿ ನಡೆಸಲು ಕ್ರಮ ಕೈಗೊಳ್ಳುವುದು.
4. ಸಂಘದ ಆಡಳಿತ ಮಂಡಳಿ ಸದಸ್ಯರನ್ನು ಆಯ್ಕೆ ಮಾಡಲು ಜರೂರು ಚುನಾವಣಾ ಕ್ರಮ ಕೈಗೊಳ್ಳತಕ್ಕದ್ದು.
5. ಸಂಘದ ಲೆಕ್ಕಪುಸ್ತಕಗಳನ್ನು ಆಯಾಯ ದಿನವೇ ಬರೆಯತಕ್ಕದ್ದು.

ಈ ಆದೇಶವನ್ನು ನನ್ನ ಸ್ವಸಹಿ ಹಾಗೂ ಕಛೇರಿಯ ಮುದ್ರೆಯೊಂದಿಗೆ ದಿನಾಂಕ: 29–03–2016ರಂದು ನೀಡಿರುತ್ತೇನೆ.

**ಜಿ.ಪ್ರಕಾಶ್**
ಸಹಕಾರ ಸಂಘಗಳ ಉಪ ನಿಬಂಧಕರು
ತುಮಕೂರು ಜಿಲ್ಲೆ, ತುಮಕೂರು.

**P.R. 506**
**SC – 10**

## ಸಹಕಾರ ಇಲಾಖೆ

### ಸಹಕಾರ ಸಂಘಗಳ ಉಪ ನಿಬಂಧಕರು, ಮಿನಿ ವಿಧಾನ ಸೌಧ, ಕೊಠಡಿ ಸಂಖ್ಯೆ 305, 2ನೇ ಮಹಡಿ, ತುಮಕೂರು ಜಿಲ್ಲೆ, ತುಮಕೂರು ಇವರ ಕಾರ್ಯಾಲಯದ ನಡವಳಿಕೆಗಳು

**ವಿಷಯ :** ಸಮಾಪನೆಗೊಂಡಿರುವ ಶ್ರೀ ರಂಗನಾಥ, ರೇಡಿಮೇಡ್ ಡ್ರೆಸ್ ಮೇಕರ್ಸ್ ಸಹಕಾರ ಸಂಘ ನಿ., ಚೇಳೂರು, ಗುಬ್ಬಿ ತಾಲ್ಲೂಕು, ತುಮಕೂರು ಜಿಲ್ಲೆ ಈ ಸಂಘವನ್ನು ಪುನ:ಶ್ಚೇತನಗೊಳಿಸುವ ಬಗ್ಗೆ.

**ಉಲ್ಲೇಖ :** 1) ಸಹಕಾರ ಸಂಘಗಳ ಸಹಾಯಕ ನಿಬಂಧಕರು, ತುಮಕೂರು ಉಪ ವಿಭಾಗ, ತುಮಕೂರು ಇವರ ಪತ್ರ ಸಂಖ್ಯೆ: ಸನಿ32/ಸಮಾಪನೆ/ಪುನ:ಶ್ಚೇತನ/ಸಿ.ಆರ್–02/2015–16, ದಿನಾಂಕ: 23–03–2016.
2) ಈ ಕಛೇರಿಯ ಸಮಾಪನಾ ಆದೇಶ ಸಂಖ್ಯೆ: ಡಿಆರ್‌ಟಿ:ಸಮಾಪನೆ:ಸಿ.ಆರ್–172/2014–15, ದಿನಾಂಕ: 30–09–2014.
3) ಸದಸ್ಯರ ಮನವಿ ದಿನಾಂಕ: 23–03–2015 ಹಾಗೂ ದಿನಾಂಕ: 19–02–2016.

**ಪ್ರಸ್ತಾವನೆ :**

ಸಮಾಪನೆಗೊಂಡಿರುವ ಶ್ರೀ ರಂಗನಾಥ, ರೇಡಿಮೇಡ್ ಡ್ರೆಸ್ ಮೇಕರ್ಸ್ ಸಹಕಾರ ಸಂಘ ನಿ., ಚೇಳೂರು, ಗುಬ್ಬಿ ತಾಲ್ಲೂಕು, ತುಮಕೂರು ಜಿಲ್ಲೆ, ಈ ಸಮಾಪನಾ ಸಂಘವನ್ನು ಉಲ್ಲೇಖ (1)ರ ಪತ್ರದಲ್ಲಿ ಸಹಕಾರ ಸಂಘಗಳ ಸಹಾಯಕ ನಿಬಂಧಕರು, ತುಮಕೂರು ಉಪ ವಿಭಾಗ, ತುಮಕೂರುರವರು ಸಂಘವನ್ನು ಸದಸ್ಯರ ಆಸಕ್ತಿ ಹಾಗೂ ಸಮಾಪನಾಧಿಕಾರಿಯವರ ಕೋರಿಕೆಯ ಮೇರೆಗೆ ಸಮಾಪನಾ ಸಂಘವನ್ನು ಪುನ:ಶ್ಚೇತನಗೊಳಿಸಿಕೊಡುವಂತೆ ಶಿಫಾರಸ್ಸು ಮಾಡಿರುತ್ತಾರೆ.

ಉಲ್ಲೇಖ (1)ರ ಪ್ರಸ್ತಾವನೆಯನ್ನು ಪರಿಶೀಲಿಸಲಾಗಿ, ಸದರಿ ಸಹಕಾರ ಸಂಘವು ಬೈಲಾ ರೀತ್ಯಾ ಕಾರ್ಯನಿರ್ವಹಿಸದೇ ಸ್ಥಗಿತಗೊಂಡ ಹಿನ್ನೆಲೆಯಲ್ಲಿ ಉಲ್ಲೇಖ (2)ರ ಈ ಕಛೇರಿ ಆದೇಶದಲ್ಲಿ ಸಮಾಪನೆಗೊಳಿಸಿ, ಸಹಕಾರ ಅಭಿವೃದ್ಧಿ ಅಧಿಕಾರಿ, ಗುಬ್ಬಿ ತಾಲ್ಲೂಕು ಇವರನ್ನು ಸಮಾಪನಾಧಿಕಾರಿಯಾಗಿ ನೇಮಕ ಮಾಡಲಾಗಿರುತ್ತದೆ. ಸಮಾಪನಾ ಸಂಘವು, ಸಹಕಾರ ಸಂಘಗಳ ಸಹಾಯಕ ನಿಬಂಧಕರು, ತುಮಕೂರು ಉಪ ವಿಭಾಗ, ತುಮಕೂರು ಇವರಿಂದ ನೋಂದಣಿ ಸಂಖ್ಯೆ:ಎ ಆರ್ ಟಿ–32/1230/1965–66, ದಿನಾಂಕ: 29–01–1966ರಲ್ಲಿ ನೋಂದಣಿಯಾಗಿ ತಾಲ್ಲೂಕು ಮಟ್ಟಕ್ಕಿಂತ ಕಡಿಮೆ ಕಾರ್ಯವ್ಯಾಪ್ತಿಯನ್ನು ಹೊಂದಿರುತ್ತದೆ.

ಸಂಘದ ಸದಸ್ಯರು ಸಂಘವನ್ನು ಪುನ:ಶ್ಚೇತನಗೊಳಿಸಿಕೊಡಲು ಮನವಿ ಸಲ್ಲಿಸಿದ್ದರ ಹಿನ್ನೆಲೆಯಲ್ಲಿ ಸಮಾಪನಾಧಿಕಾರಿಯವರು ಸ್ಥಳ ಪರಿಶೀಲನೆ ಮಾಡಿ ಸಂಘವು ಪುನ:ಶ್ಚೇತನಗೊಂಡ ನಂತರ ಸಮರ್ಪಕವಾಗಿ ಕಾರ್ಯನಿರ್ವಹಿಸುವ ಬಗ್ಗೆ ಸಾಧ್ಯತಾ ವರದಿ ಹಾಗೂ ಸಮಾಪನಾಧಿಕಾರಿಯವರ ನಡವಳಿಗಳನ್ನು ಸಲ್ಲಿಸಿರುತ್ತಾರೆ.

ಸಂಘದ ಕಾರ್ಯವ್ಯಾಪ್ತಿಯ ಸದಸ್ಯರು ದಿನಾಂಕ: 23-03-2015 ಮತ್ತು 19-02-2016ರಂದು ಸಂಘದ ಸದಸ್ಯರುಗಳು ಸಮಾಪನಾಧಿಕಾರಿಯವರಿಗೆ ಮನವಿ ಸಲ್ಲಿಸಿ, ಸದಸ್ಯರುಗಳ ಹಿತ ದೃಷ್ಟಿಯಿಂದ ಮತ್ತು ಆರ್ಥಿಕ ಅಭಿವೃದ್ಧಿ ದೃಷ್ಟಿಯಿಂದ ಹಾಗೂ ಸದಸ್ಯರಿಗೆ ಸರ್ಕಾರದ ಸೌಲಭ್ಯಗಳನ್ನು ಒದಗಿಸುವ ದೃಷ್ಟಿಯಿಂದ ಈ ಸಂಘವನ್ನು ಪುನ:ಶ್ಚೇತನಗೊಳಿಸಿ ಆಡಳಿತ ಮಂಡಳಿ ರಚನೆಗೆ ಸದಾವಕಾಶ ಮಾಡಿಕೊಡಬೇಕೆಂದು ಕೋರಿಕೊಂಡ ಹಿನ್ನೆಲೆಯಲ್ಲಿ, ಉಲ್ಲೇಖ (1)ರ ಪತ್ರದಲ್ಲಿ ಸಹಾಯಕ ನಿಬಂಧಕರು ಪುನ:ಶ್ಚೇತನಗೊಳಿಸಿ ಆದೇಶಿಸಲು ಕೋರಿ ಪ್ರಸ್ತಾವೆ ಸಲ್ಲಿಸಿದ ಹಿನ್ನೆಲೆಯಲ್ಲಿ ಸದಸ್ಯರ ಹಿತದೃಷ್ಟಿಯಿಂದ ಸಂಘವನ್ನು ಪುನ:ಶ್ಚೇತನಗೊಳಿಸುವುದು ಸೂಕ್ತವೆಂದು ಅಭಿಪ್ರಾಯ ಪಡುತ್ತಾ, ಈ ಕೆಳಕಂಡಂತೆ ಆದೇಶ ಹೊರಡಿಸಲಾಗಿದೆ.

**: ಆದೇಶ :**

**ಸಂಖ್ಯೆ: ಡಿಆರ್‌ಟಿ:ಸಮಾಪನೆ: ಪುನ:ಶ್ಚೇತನ:172:2014-15, ದಿನಾಂಕ: 29-03-2016**

ಪ್ರಸ್ತಾವನೆಯಲ್ಲಿ ವಿವರಿಸಿರುವ ಅಂಶಗಳ ಹಿನ್ನೆಲೆಯಲ್ಲಿ ಹಾಗೂ ಕರ್ನಾಟಕ ಸಹಕಾರ ಸಂಘಗಳ ಕಾಯ್ದೆ, 1959ರ ಕಲಂ 72(3) ಹಾಗೂ ಸರ್ಕಾರದ ಅಧಿಸೂಚನೆ ಸಂಖ್ಯೆ: ಸಿಒ/139/ಸಿಎಲ್‌ಎಂ:2010, ದಿನಾಂಕ: 17-02-2011ರನ್ವಯ ದತ್ತವಾಗಿರುವ ಅಧಿಕಾರವನ್ನು ಚಲಾಯಿಸಿ, ಜಿ.ಪ್ರಕಾಶ್, ಸಹಕಾರ ಸಂಘಗಳ ಉಪ ನಿಬಂಧಕರು, ತುಮಕೂರು ಜಿಲ್ಲೆ, ತುಮಕೂರು ಆದ ನಾನು, ಶ್ರೀ ರಂಗನಾಥ ರೆಡಿಮೇಡ್ ಡ್ರೆಸ್ ಮೇಕರ್ಸ್, ಚೇಳೂರು, ಗುಬ್ಬಿ ತಾಲ್ಲೂಕು, ತುಮಕೂರು ಜಿಲ್ಲೆ ಈ ಸಹಕಾರ ಸಂಘವನ್ನು ಕರ್ನಾಟಕ ಸಹಕಾರ ಕಾಯ್ದೆ, 1959 ಕಲಂ 72ರನ್ವಯ ಸಮಾಪನೆಗೊಳಿಸಿ ಹೊರಡಿಸಿರುವ ಈ ಕಛೇರಿಯ ಆದೇಶ ಸಂಖ್ಯೆ: ಡಿಆರ್‌ಟಿ:ಸಮಾಪನೆ:ಸಿಆರ್-172/2014-15, ದಿನಾಂಕ: 30-09-2014 ಈ ಕೂಡಲೇ ಜಾರಿಗೆ ಬರುವಂತೆ ರದ್ದುಪಡಿಸಿ ಆದೇಶಿಸಿರುತ್ತೇನೆ ಹಾಗೂ ಶ್ರೀ ರಂಗನಾಥ ರೆಡಿಮೇಡ್ ಡ್ರೆಸ್ ಮೇಕರ್ಸ್, ಚೇಳೂರು, ಗುಬ್ಬಿ ತಾಲ್ಲೂಕು ಈ ಸಹಕಾರ ಸಂಘವನ್ನು ಈ ಕೆಳಕಂಡ ಷರತ್ತಿಗೊಳಪಟ್ಟು ಪುನ:ಶ್ಚೇತನಗೊಳಿಸಿ ಆದೇಶಿಸಿರುತ್ತೇನೆ.

**ಷರತ್ತುಗಳು :-**

1. ಸಂಘವು ಪುನ:ಶ್ಚೇತನಗೊಂಡ ನಂತರ ಕಾರ್ಯಚಟುವಟಿಕೆಗಳನ್ನು ಆರಂಭಿಸತಕ್ಕದ್ದು ಮತ್ತು 6 ತಿಂಗಳೊಳಗೆ ಸಂಘದ ಷೇರು ಮೊಬಲಗನ್ನು ದ್ವಿಗುಣಗೊಳಿಸತಕ್ಕದ್ದು.
2. ಸಂಘದ ವಾರ್ಷಿಕ ಮಹಾಸಭೆಯನ್ನು ಪ್ರತಿವರ್ಷ ತಪ್ಪದೇ ನಿಗಧಿತ ಅವಧಿಯೊಳಗೆ ನಡೆಸತಕ್ಕದ್ದು.
3. ಸಂಘದ ವಾರ್ಷಿಕ ಲೆಕ್ಕಪರಿಶೋಧನೆಯನ್ನು ಪ್ರತಿವರ್ಷ ತಪ್ಪದೇ ನಿಗಧಿತ ಸಮಯದಲ್ಲಿ ನಡೆಸಲು ಕ್ರಮ ಕೈಗೊಳ್ಳುವುದು.
4. ಸಂಘದ ಆಡಳಿತ ಮಂಡಳಿ ಸದಸ್ಯರನ್ನು ಆಯ್ಕೆ ಮಾಡಲು ಜರೂರು ಚುನಾವಣಾ ಕ್ರಮ ಕೈಗೊಳ್ಳತಕ್ಕದ್ದು.
5. ಸಂಘದ ಲೆಕ್ಕಪುಸ್ತಕಗಳನ್ನು ಆಯಾಯ ದಿನವೇ ಬರೆಯತಕ್ಕದ್ದು.

ಈ ಆದೇಶವನ್ನು ನನ್ನ ಸ್ವಸಹಿ ಹಾಗೂ ಕಛೇರಿಯ ಮುದ್ರೆಯೊಂದಿಗೆ ದಿನಾಂಕ: 29-03-2016ರಂದು ನೀಡಿರುತ್ತೇನೆ.

**ಜಿ.ಪ್ರಕಾಶ್**

ಸಹಕಾರ ಸಂಘಗಳ ಉಪ ನಿಬಂಧಕರು

ತುಮಕೂರು ಜಿಲ್ಲೆ, ತುಮಕೂರು.

## ಸಹಕಾರ ಇಲಾಖೆ

**ಸಹಕಾರ ಸಂಘಗಳ ಉಪ ನಿಬಂಧಕರು, ಮಿನಿ ವಿಧಾನಸೌಧ, ಕೊಠಡಿ ಸಂಖ್ಯೆ. 305, 2ನೇ ಮಹಡಿ, ತುಮಕೂರು ಜಿಲ್ಲೆ, ತುಮಕೂರು ಇವರ ಕಾರ್ಯಾಲಯದ ನಡವಳಿಕೆಗಳು**

**ವಿಷಯ :** ಸಮಾಪನೆಗೊಂಡಿರುವ ಉಣ್ಣೆ ಕೈಮಗ್ಗ ನೇಕಾರರ ಸಹಕಾರ ಸಂಘ ನಿ., ಕಾಮಗೊಂಡನಹಳ್ಳಿ, ಶಿರಾ ತಾಲ್ಲೂಕು ಈ ಸಂಘವನ್ನು ಪುನ:ಶ್ಚೇತನಗೊಳಿಸುವ ಬಗ್ಗೆ.

**ಉಲ್ಲೇಖ :** 1) ಸಹಕಾರ ಸಂಘಗಳ ಸಹಾಯಕ ನಿಬಂಧಕರು ಮಧುಗಿರಿ ಉಪ ವಿಭಾಗ, ಮಧುಗಿರಿ ಇವರ ಪತ್ರ ಸಂಖ್ಯೆ: ಸನಿ33/ಎಂಕೆಟಿ/ಸಮಾಪನೆ/2015-16, ದಿನಾಂಕ: 29-03-2016.

2) ಈ ಕಛೇರಿಯ ಸಮಾಪನಾ ಆದೇಶ ಸಂಖ್ಯೆ: ಡಿಆರ್‌ಟಿ/ಎಲ್‌ಕ್ಯೂಡಿ/ಸಿ.ಆರ್-64/2012-13, ದಿನಾಂಕ: 19-02-2013.

3) ಸದಸ್ಯರ ಮನವಿ ದಿನಾಂಕ: 11-01-2016.

**ಪ್ರಸ್ತಾವನೆ :**

ಸಮಾಪನೆಗೊಂಡಿರುವ ಉಣ್ಣೆ ಕೈಮಗ್ಗ ನೇಕಾರರ ಸಹಕಾರ ಸಂಘ ನಿ., ಕಾಮಗೊಂಡನಹಳ್ಳಿ, ಶಿರಾ ತಾಲ್ಲೂಕು, ತುಮಕೂರು ಜಿಲ್ಲೆ ಈ ಸಮಾಪನಾ ಸಂಘವನ್ನು ಉಲ್ಲೇಖ (1)ರ ಪತ್ರದಲ್ಲಿ ಸಹಕಾರ ಸಂಘಗಳ ಸಹಾಯಕ ನಿಬಂಧಕರು, ಮಧುಗಿರಿ ಉಪ ವಿಭಾಗ, ಮಧುಗಿರಿರವರು ಸದಸ್ಯರ ಆಸಕ್ತಿ ಹಾಗೂ ಸಮಾಪನಾಧಿಕಾರಿಯವರ ಕೋರಿಕೆಯ ಮೇರೆಗೆ ಸಮಾಪನಾ ಸಂಘವನ್ನು ಪುನಶ್ಚೇತನಗೊಳಿಸಿಕೊಡುವಂತೆ ಶಿಫಾರಸ್ಸು ಮಾಡಿರುತ್ತಾರೆ.

ಉಲ್ಲೇಖ (1)ರ ಪ್ರಸ್ತಾವನೆಯನ್ನು ಪರಿಶೀಲಿಸಲಾಗಿ, ಸದರಿ ಸಹಕಾರ ಸಂಘವು ಬೈಲಾ ರೀತ್ಯಾ ಕಾರ್ಯನಿರ್ವಹಿಸದೇ ಸ್ಥಗಿತಗೊಂಡ ಹಿನ್ನೆಲೆಯಲ್ಲಿ ಉಲ್ಲೇಖ (2)ರ ಈ ಕಛೇರಿ ಆದೇಶದಲ್ಲಿ ಸಮಾಪನೆಗೊಳಿಸಿ, ಸಹಕಾರ ಸಂಘಗಳ ನಿರೀಕ್ಷಕರು, ಸಹಕಾರ ಅಭಿವೃದ್ಧಿ ಅಧಿಕಾರಿ ಕಛೇರಿ, ಶಿರಾ ತಾಲ್ಲೂಕು ಇವರನ್ನು ಸಮಾಪನಾಧಿಕಾರಿಯಾಗಿ ನೇಮಕ ಮಾಡಲಾಗಿರುತ್ತದೆ. ಸಮಾಪನಾ ಸಂಘದ ನೋಂದಣಿ ಸಂಖ್ಯೆ: ಡಿಆರ್‌ಟಿ/817/1955-56, ದಿನಾಂಕ: 14-05-1956ರಲ್ಲಿ ನೋಂದಣಿಯಾಗಿ ತಾಲ್ಲೂಕು ಮಟ್ಟಕ್ಕಿಂತ ಕಡಿಮೆ ಕಾರ್ಯವ್ಯಾಪ್ತಿಯನ್ನು ಹೊಂದಿರುತ್ತದೆ.

ಉಲ್ಲೇಖ (3)ರ ರೀತ್ಯಾ ಸಂಘದ ಸದಸ್ಯರು ಸಂಘವನ್ನು ಪುನ:ಶ್ಚೇತನಗೊಳಿಸಿಕೊಡಲು ಮನವಿ ಸಲ್ಲಿಸಿದ್ದರ ಹಿನ್ನೆಲೆಯಲ್ಲಿ ಸಮಾಪನಾಧಿಕಾರಿಯವರು ಸ್ಥಳ ಪರಿಶೀಲನೆ ಮಾಡಿ ಸಂಘವು ಪುನ:ಶ್ಚೇತನಗೊಂಡ ನಂತರ ಸಮರ್ಪಕವಾಗಿ ಕಾರ್ಯನಿರ್ವಹಿಸುವ ಬಗ್ಗೆ ಸಾಧ್ಯತಾ ವರದಿ ಹಾಗೂ ಸಮಪನಾಧಿಕಾರಿಯವರ ನಡವಳಿಗಳನ್ನು ಸಲ್ಲಿಸಿರುತ್ತಾರೆ.

ಸದಸ್ಯರುಗಳ ಆರ್ಥಿಕ ಅಭಿವೃದ್ಧಿ ದೃಷ್ಟಿಯಿಂದ ಹಾಗೂ ಸಂಘದ ಮುಖಾಂತರ ಉಣ್ಣೆ ಉತ್ಪಾದಕ ಸದಸ್ಯರಿಗೆ ಸರ್ಕಾರದ ಸೌಲಭ್ಯಗಳನ್ನು ಒದಗಿಸುವ ದೃಷ್ಟಿಯಿಂದ ಈ ಸಂಘವನ್ನು ಪುನ:ಶ್ಚೇತನಗೊಳಿಸಿ ಆಡಳಿತ ಮಂಡಳಿ ರಚನೆಗೆ ಸದಾವಕಾಶ ಮಾಡಿಕೊಡಬೇಕೆಂದು ಉಲ್ಲೇಖ (1)ರ ಪತ್ರದಲ್ಲಿ ಸಹಾಯಕ ನಿಬಂಧಕರು, ಮಧುಗಿರಿ ಇವರು ಪುನ:ಶ್ಚೇತನಗೊಳಿಸಿ ಆದೇಶಿಸಲು ಕೋರಿ ಪ್ರಸ್ತಾವನೆ ಸಲ್ಲಿಸಿದ ಹಿನ್ನೆಲೆಯಲ್ಲಿ ಸದಸ್ಯರ ಹಿತದೃಷ್ಟಿಯಿಂದ ಸಂಘವನ್ನು ಪುನ:ಶ್ಚೇತನಗೊಳಿಸುವುದು ಸೂಕ್ತವೆಂದು ಅಭಿಪ್ರಾಯಪಡುತ್ತಾ, ಈ ಕೆಳಕಂಡಂತೆ ಆದೇಶ ಹೊರಡಿಸಲಾಗಿದೆ.

**: ಆದೇಶ :**

**ಸಂಖ್ಯೆ: ಡಿಆರ್‌ಟಿ:ಎಲ್‌ಕ್ಯೂಡಿ: ಪುನಶ್ಚೇತನ:ಸಿ.ಆರ್–64:2012–13, ದಿನಾಂಕ: 31–03–2016**

ಪ್ರಸ್ತಾವನೆಯಲ್ಲಿ ವಿವರಿಸಿರುವ ಅಂಶಗಳ ಹಿನ್ನೆಲೆಯಲ್ಲಿ ಹಾಗೂ ಕರ್ನಾಟಕ ಸಹಕಾರ ಸಂಘಗಳ ಕಾಯ್ದೆ, 1959ರ ಕಲಂ 72(3) ಹಾಗೂ ಸರ್ಕಾರದ ಅಧಿಸೂಚನೆ ಸಂಖ್ಯೆ: ಸಿಒ/139/ಸಿಎಲ್‌ಎಂ:2010, ದಿನಾಂಕ: 17–02–2011ರನ್ವಯ ದತ್ತವಾಗಿರುವ ಅಧಿಕಾರವನ್ನು ಚಲಾಯಿಸಿ, ಜಿ.ಪ್ರಕಾಶ್, ಸಹಕಾರ ಸಂಘಗಳ ಉಪ ನಿಬಂಧಕರು, ತುಮಕೂರು ಜಿಲ್ಲೆ, ತುಮಕೂರು ಆದ ನಾನು, ಸಮಾಪನೆಗೊಂಡಿರುವ ಉಣ್ಣೆ ಕೈಮಗ್ಗ ನೇಕಾರರ ಸಹಕಾರ ಸಂಘ ನಿ., ಕಾಮಗೊಂಡನಹಳ್ಳಿ, ಶಿರಾ ತಾಲ್ಲೂಕು, ತುಮಕೂರು ಜಿಲ್ಲೆ ಈ ಸಹಕಾರ ಸಂಘವನ್ನು ಕರ್ನಾಟಕ ಸಹಕಾರ ಕಾಯ್ದೆ, 1959 ಕಲಂ 72ರನ್ವಯ ಸಮಾಪನೆಗೊಳಿಸಿ ಹೊರಡಿಸಿರುವ ಈ ಕಛೇರಿಯ ಆದೇಶ ಸಂಖ್ಯೆ: ಡಿಆರ್‌ಟಿ:ಎಲ್‌ಕ್ಯೂಡಿ:ಸಿಆರ್–64/2012–13, ದಿನಾಂಕ: 19–02–2013ನ್ನು ಈ ಕೂಡಲೇ ಜಾರಿಗೆ ಬರುವಂತೆ ರದ್ದುಪಡಿಸಿ, ಸಮಾಪನೆಗೊಂಡಿರುವ ಉಣ್ಣೆ ಕೈಮಗ್ಗ ನೇಕಾರರ ಸಹಕಾರ ಸಂಘ ನಿ., ಕಾಮಗೊಂಡನಹಳ್ಳಿ, ಶಿರಾ ತಾಲ್ಲೂಕು, ತುಮಕೂರು ಜಿಲ್ಲೆ ಈ ಸಂಘವನ್ನು ಈ ಕೆಳಕಂಡ ಷರತ್ತಿಗೊಳಪಟ್ಟು ಪುನ:ಶ್ಚೇತನಗೊಳಿಸಿ ಆದೇಶಿಸಿರುತ್ತೇನೆ.

**ಷರತ್ತುಗಳು :–**

1. ಸಂಘವು ಪುನ:ಶ್ಚೇತನಗೊಂಡ ನಂತರ ಕಾರ್ಯಚಟುವಟಿಕೆಗಳನ್ನು ಆರಂಭಿಸತಕ್ಕದ್ದು ಮತ್ತು 6 ತಿಂಗಳೊಳಗೆ ಸಂಘದ ಷೇರು ಮೊಬಲಗನ್ನು ದ್ವಿಗುಣಗೊಳಿಸತಕ್ಕದ್ದು.
2. ಸಂಘದ ವಾರ್ಷಿಕ ಮಹಾಸಭೆಯನ್ನು ಪ್ರತಿವರ್ಷ ತಪ್ಪದೇ ನಿಗಧಿತ ಅವಧಿಯೊಳಗೆ ನಡೆಸತಕ್ಕದ್ದು.
3. ಸಂಘದ ವಾರ್ಷಿಕ ಲೆಕ್ಕಪರಿಶೋಧನೆಯನ್ನು ಪ್ರತಿವರ್ಷ ತಪ್ಪದೇ ನಿಗಧಿತ ಸಮಯದಲ್ಲಿ ನಡೆಸಲು ಕ್ರಮ ಕೈಗೊಳ್ಳುವುದು.
4. ಸಂಘದ ಆಡಳಿತ ಮಂಡಳಿ ಸದಸ್ಯರನ್ನು ಆಯ್ಕೆ ಮಾಡಲು ಜರೂರು ಚುನಾವಣಾ ಕ್ರಮ ಕೈಗೊಳ್ಳತಕ್ಕದ್ದು.
5. ಸಂಘದ ಲೆಕ್ಕಪುಸ್ತಕಗಳನ್ನು ಆಯಾಯ ದಿನವೇ ಬರೆಯತಕ್ಕದ್ದು.

ಈ ಆದೇಶವನ್ನು ನನ್ನ ಸ್ವಸಹಿ ಹಾಗೂ ಕಛೇರಿಯ ಮುದ್ರೆಯೊಂದಿಗೆ ದಿನಾಂಕ: 31–03–2016ರಂದು ನೀಡಿರುತ್ತೇನೆ.

**P.R. 507** **ಜಿ.ಪ್ರಕಾಶ್**

**SC – 10** ಸಹಕಾರ ಸಂಘಗಳ ಉಪ ನಿಬಂಧಕರು

ತುಮಕೂರು ಜಿಲ್ಲೆ, ತುಮಕೂರು.

## ಸಹಕಾರ ಇಲಾಖೆ

### ಸಹಕಾರ ಸಂಘಗಳ ಉಪ ನಿಬಂಧಕರು, ಮಿನಿ ವಿಧಾನಸೌಧ, ಕೊಠಡಿ ಸಂಖ್ಯೆ. 305, 2ನೇ ಮಹಡಿ, ತುಮಕೂರು ಜಿಲ್ಲೆ, ತುಮಕೂರು ಇವರ ಕಾರ್ಯಾಲಯದ ನಡವಳಿಕೆಗಳು

**ವಿಷಯ :** ಸಮಾಪನೆಗೊಂಡಿರುವ ತುರುವೇಕೆರೆ ಟೌನ್, ಬಳಕೆದಾರರ ಸಹಕಾರ ಸಂಘ ನಿ., ತುರುವೇಕೆರೆ ತಾಲ್ಲೂಕು ಇದರ ನೋಂದಣಿ ರದ್ದುಪಡಿಸುವ ಕುರಿತು.

**ಉಲ್ಲೇಖ :** 1) ಸಹಕಾರ ಸಂಘಗಳ ಸಹಾಯಕ ನಿಬಂಧಕರು, ತಿಪಟೂರು ಉಪ ವಿಭಾಗ, ತಿಪಟೂರುರವರ ಪ್ರಸ್ತಾವನೆ ಪತ್ರದ ಸಂಖ್ಯೆ: ಸನಿ34/ಎಲ್‌ಕ್ಯೂಡಿ/54/1999–2000, ದಿನಾಂಕ: 23–03–2016.

2) ಈ ಕಛೇರಿಯ ಸಮಾಪನಾ ಆದೇಶ ಸಂಖ್ಯೆ: ಡಿಆರ್‌ಟಿ/ಡಿಎಲ್‌ಎಸ್:130/ಸಿ.ಆರ್–41/1999–2000, ದಿನಾಂಕ: 27–11–1999.

3) ಸಮಾಪನಾಧಿಕಾರಿಗಳ ಪ್ರಸ್ತಾವನೆ ದಿನಾಂಕ: 15–03–2016.

4) ದಿನಾಂಕ: 17–03–2016ರ ಜಿಲ್ಲಾ ಮಟ್ಟದ ಪತ್ರಿಕೆಗಳಾದ ಏಕೇಶ್ ಪತ್ರಿಕೆ, ಪ್ರಜಾಯೋಗ ಮತ್ತು ತುಮಕೂರು ವಾರ್ತೆ ದಿನಪತ್ರಿಕೆಯಲ್ಲಿ ಸದರಿ ಸಂಘದ ಸದಸ್ಯರ ಗಮನಕ್ಕೆ ಪ್ರಕಟಿಸಿರುವಂತೆ.

**ಪ್ರಸ್ತಾವನೆ :**

ಸಮಾಪನೆಗೊಂಡಿರುವ ತುರುವೇಕೆರೆ ಟೌನ್, ಬಳಕೆದಾರರ ಸಹಕಾರ ಸಂಘ ನಿ., ತುರುವೇಕೆರೆ ತಾಲ್ಲೂಕು ಈ ಸಹಕಾರ ಸಂಘವು ಸಹಕಾರ ಸಂಘಗಳ ಸಹಾಯಕ ನಿಬಂಧಕರು, ತಿಪಟೂರು ಉಪ ವಿಭಾಗ, ತಿಪಟೂರುರವರಿಂದ ನೋಂದಾಯಿಸಲ್ಪಟ್ಟಿದ್ದು, ನೋಂದಣಿ ಸಂಖ್ಯೆ: ಎಆರ್‌ಟಿ/1140/1963–64, ದಿನಾಂಕ: 23–07–1963ರನ್ವಯ ನೋಂದಣಿಯಾಗಿರುತ್ತದೆ. ಸಂಘದ ಕಾರ್ಯವ್ಯಾಪ್ತಿಯ ತಾಲ್ಲೂಕು ಮಟ್ಟಕ್ಕಿಂತ ಕಡಿಮೆ ಇರುತ್ತದೆ. ಸದರಿ ಸಂಘವು ತನ್ನ ಉಪನಿಯಮಗಳ ಉದ್ದೇಶಗಳಿಗನುಗುಣವಾಗಿ ಕಾರ್ಯನಿರ್ವಹಿಸದೇ ಸ್ಥಗಿತಗೊಂಡ ಕಾರಣ ಸಂಘವನ್ನು ಸಮಾಪನೆಗೊಳಿಸುವಂತೆ ತಿಪಟೂರು ಉಪವಿಭಾಗದ ಸಹಾಯಕ ನಿಬಂಧಕರು ಈ ಕಛೇರಿಗೆ ಪ್ರಸ್ತಾವವೆ ಸಲ್ಲಿಸಲಾಗಿದ್ದ ಹಿನ್ನೆಲೆಯಲ್ಲಿ ಉಲ್ಲೇಖ (2)ರ ಈ ಕಛೇರಿ ಆದೇಶದ ರೀತ್ಯಾ

ಸಂಘವನ್ನು ಸಮಾಪನೆಗೊಳಿಸಿ ಸಹಕಾರ ಅಭಿವೃದ್ಧಿ ಅಧಿಕಾರಿ, ತುರುವೇಕೆರೆ ತಾಲ್ಲೂಕು ಇವರನ್ನು ಸಮಾಪನಾಧಿಕಾರಿಯನ್ನಾಗಿ ನೇಮಿಸಲಾಗಿತ್ತು. ಸಮಾಪನಾಧಿಕಾರಿಗಳು ಸಂಘದ ಪ್ರಭಾರವನ್ನು ಪಡೆದು, ಲೆಕ್ಕಪರಿಶೋಧನಾ ವರದಿ, ಸಂಘದ ಆಸ್ತಿ–ಜವಾಬ್ದಾರಿ ತ:ಖ್ತೆ ರೀತ್ಯಾ ವಿಲೇವಾರಿ ಮಾಡಿರುತ್ತಾರೆ. ಸಮಾಪನಾಧಿಕಾರಿಗಳು ದಿನಾಂಕ: 15–03–2016ರಂದು ನಡೆದ ಅಂತಿಮ ಸಭೆಯಲ್ಲಿ ನಿರ್ಣಯ ಕೈಗೊಂಡು ಅದರಂತೆ, ಆಸ್ತಿ–ಜವಾಬ್ದಾರಿಯನ್ನು ವಿಲೇವಾರಿ ಮಾಡಿರುತ್ತಾರೆ. ದಿನಾಂಕ: 15–03–2016ಕ್ಕೆ ಆಸ್ತಿ ಜವಾಬ್ದಾರಿ ಶೂನ್ಯವಾಗಿರುತ್ತದೆ. ಮತ್ತು ಸಂಘದ ನೋಂದಣಿ ಕ್ರಮಾಂಕವನ್ನು ರದ್ದುಪಡಿಸಲು ತೀರ್ಮಾನಿಸಿ ಪ್ರಸ್ತಾವೆಯನ್ನು ಸಹಕಾರ ಸಂಘಗಳ ಸಹಾಯಕ ನಿಬಂಧಕರು, ತಿಪಟೂರು ಉಪವಿಭಾಗರವರಿಗೆ ಸಲ್ಲಿಸಿದ್ದು, ಉಲ್ಲೇಖ (3)ರ ಪತ್ರದಲ್ಲಿ ಈ ಕಛೇರಿಗೆ ಶಿಫಾರಸ್ಸು ಮಾಡಿರುತ್ತಾರೆ. ಸಹಕಾರ ಅಭಿವೃದ್ಧಿ ಅಧಿಕಾರಿ, ತುರುವೇಕೆರೆ ತಾಲ್ಲೂಕುರವರ ಶಿಫಾರಸ್ಸು ಮತ್ತು ಸಹಕಾರ ಸಂಘಗಳ ಸಹಾಯಕ ನಿಬಂಧಕರ ಶಿಫಾರಸ್ಸು ಹಾಗೂ ದಿನಾಂಕ: 15–03–2016ರಂದು ನಡೆಸಿದ ಸಮಾಪನಾಧಿಕಾರಿ ಸಭೆಯ ನಡವಳಿಕೆ ಮತ್ತು ಶೂನ್ಯಗೊಳಿಸಿದ ಆಸ್ತಿ–ಜವಾಬ್ದಾರಿ ಸಲ್ಲಿಸಿರುವ ಕಾರಣ ಸಂಘವನ್ನು ಮುಂದುವರೆಸುವುದರಿಂದ ಸದಸ್ಯರಾಗಲೀ ಸಾರ್ವಜನಿಕರಾಗಲೀ ಯಾವುದೇ ಪ್ರಯೋಜನವಿಲ್ಲವೆಂದು ಮನಗಂಡು ಈ ಸಹಕಾರ ಸಂಘದ ನೋಂದಣಿ ಕ್ರಮಾಂಕವನ್ನು ರದ್ದುಪಡಿಸುವುದು ಸೂಕ್ತವೆಂದು ಪರಿಗಣಿಸಿ ಈ ಕೆಳಕಂಡ ಆದೇಶ ಹೊರಡಿಸಲಾಗಿದೆ.

**: ಆದೇಶ :**

**ಸಂಖ್ಯೆ: ಡಿಆರ್‌ಟಿ:ಡಿಎಲ್‌ಎಸ್:130/ಸಿ.ಆರ್–41:1999–2000, ದಿನಾಂಕ: 29–03–2016**

ಪ್ರಸ್ತಾವನೆಯಲ್ಲಿ ವಿವರಿಸಿರುವಂತೆ, ಕರ್ನಾಟಕ ಸಹಕಾರ ಸಂಘಗಳ ಕಾಯ್ದೆ, 1959ರ ಕಲಂ 75 ರನ್ವಯ ಹಾಗೂ ಸರ್ಕಾರದ ಅಧಿಸೂಚನೆ ಸಂಖ್ಯೆ: ಸಿಒ/139/ಸಿಎಲ್‌ಎಂ:2010, ದಿನಾಂಕ: 17–02–2011ರನ್ವಯ ದತ್ತವಾಗಿರುವ ಅಧಿಕಾರವನ್ನು ಚಲಾಯಿಸುತ್ತಾ, ಜಿ.ಪ್ರಕಾಶ್ ಸಹಕಾರ ಸಂಘಗಳ ಉಪ ನಿಬಂಧಕರು, ತುಮಕೂರು ಜಿಲ್ಲೆ, ತುಮಕೂರು ಆದ ನಾನು, ಸಮಾಪನೆಯಲ್ಲಿರುವ ತುರುವೇಕೆರೆ ಟೌನ್ ಬಳಕೆದಾರರ ಸಹಕಾರ ಸಂಘ ನಿ., ತುರುವೇಕೆರೆ ತಾಲ್ಲೂಕು ಈ ಸಹಕಾರ ಸಂಘದ ನೋಂದಣಿ ಸಂಖ್ಯೆ: ಎಆರ್‌ಟಿ/1140/1963–64, ದಿನಾಂಕ: 23–07–1963 ರದ್ದುಪಡಿಸಿ ಕೂಡಲೇ ಜಾರಿಗೆ ಬರುವಂತೆ ಆದೇಶ ಹೊರಡಿಸಲಾಗಿದೆ.

ಈ ಆದೇಶದ ದಿನಾಂಕದಿಂದ ಸಂಘವು ತನ್ನ ಅಸ್ತಿತ್ವವನ್ನು ಕಳೆದುಕೊಂಡು ಪೂರ್ಣವಾಗಿ ವಿಸರ್ಜಿತವಾಗಿದೆ ಎಂದು ಪರಿಗಣಿಸತಕ್ಕದ್ದು. ಈ ಸಹಕಾರ ಸಂಘಕ್ಕೆ ಸಂಬಂಧಿಸಿದ ದಾಖಲಾತಿಗಳನ್ನು ಸಹಕಾರ ಸಂಘಗಳ ನಿಯಮಗಳು, 1960ರ ನಿಯಮ 33(ಒ)ರನ್ವಯ 03 ವರ್ಷಗಳ ಕಾಲ ಈ ಸಂಘದ ವಿಶಿಷ್ಟ ದಾಖಲಾತಿಗಳನ್ನು ಸಹಕಾರ ಸಂಘಗಳ ಸಹಾಯಕ ನಿಬಂಧಕರು, ತಿಪಟೂರು ಇವರ ಕಾರ್ಯಾಲಯದಲ್ಲಿ ಕಾಯ್ದಿರಿಸತಕ್ಕದ್ದು.

ಈ ಆದೇಶವನ್ನು ನನ್ನ ಸ್ವ–ಸಹಿ ಮತ್ತು ಕಛೇರಿ ಮೊಹರಿನೊಂದಿಗೆ ದಿನಾಂಕ: 29–03–2016ರಂದು ನೀಡಿರುತ್ತೇನೆ.

**ಜಿ.ಪ್ರಕಾಶ್**
ಸಹಕಾರ ಸಂಘಗಳ ಉಪ ನಿಬಂಧಕರು
ತುಮಕೂರು ಜಿಲ್ಲೆ, ತುಮಕೂರು.

**P.R. 508**
**SC – 10**

## ಸಹಕಾರ ಇಲಾಖೆ

## ಸಹಕಾರ ಸಂಘಗಳ ಉಪ ನಿಬಂಧಕರು, ಮಿನಿ ವಿಧಾನಸೌಧ, ಕೊಠಡಿ ಸಂಖ್ಯೆ 305, 2ನೇ ಮಹಡಿ, ತುಮಕೂರು ಜಿಲ್ಲೆ, ತುಮಕೂರು ಇವರ ಕಾರ್ಯಾಲಯದ ನಡವಳಿಕೆಗಳು

**ವಿಷಯ :** ಸಮಾಪನೆಗೊಂಡಿರುವ ಹಾಲು ಉತ್ಪಾದಕರ ಸಹಕಾರ ಸಂಘ ನಿ., ತಾಳಕೆರೆ, ತುರುವೇಕೆರೆ ತಾಲ್ಲೂಕು ಇದರ ನೋಂದಣಿ ರದ್ದುಪಡಿಸುವ ಕುರಿತು.

**ಉಲ್ಲೇಖ :**
1) ಸಹಕಾರ ಸಂಘಗಳ ಸಹಾಯಕ ನಿಬಂಧಕರು, ತಿಪಟೂರು ಉಪವಿಭಾಗ, ತಿಪಟೂರುರವರ ಪ್ರಸ್ತಾವನೆ ಪತ್ರದ ಸಂಖ್ಯೆ: ಸನಿ34/ಎಲ್‌ಕ್ಯೂಡಿ/56/1996–97, ದಿನಾಂಕ: 30–09–2015.
2) ಈ ಕಛೇರಿಯ ಸಮಾಪನಾ ಆದೇಶ ಸಂಖ್ಯೆ: ಡಿಆರ್‌ಟಿ:ಡಿಎಲ್‌ಎಸ್:03/2006–07,ದಿನಾಂಕ: 22–05–2007
3) ಸಮಾಪನಾಧಿಕಾರಿಗಳ ಪ್ರಸ್ತಾವನೆ ದಿನಾಂಕ: 21–03–2016.
4) ದಿನಾಂಕ: 17–03–2016ರ ಜಿಲ್ಲಾ ಮಟ್ಟದ ಪತ್ರಿಕೆಗಳಾದ ಏಕೇಶ್ ಪತ್ರಿಕೆ, ಪ್ರಜಾಯೋಗ ಮತ್ತು ತುಮಕೂರು ವಾರ್ತೆ ದಿನಪತ್ರಿಕೆಯಲ್ಲಿ ಸದರಿ ಸಂಘದ ಸದಸ್ಯರ ಗಮನಕ್ಕೆ ಪ್ರಕಟಿಸಿರುವಂತೆ.

**ಪ್ರಸ್ತಾವನೆ :**

ಸಮಾಪನೆಗೊಂಡಿರುವ ಹಾಲು ಉತ್ಪಾದಕರ ಸಹಕಾರ ಸಂಘ ನಿ., ತಾಳಕೆರೆ, ತುರುವೇಕೆರೆ ತಾಲ್ಲೂಕು ಈ ಸಹಕಾರ ಸಂಘವು ಸಹಕಾರ ಸಂಘಗಳ ಸಹಾಯಕ ನಿಬಂಧಕರು, ತಿಪಟೂರು ಉಪ ವಿಭಾಗ, ತಿಪಟೂರುರವರಿಂದ ಸಂಘದ ನೋಂದಣಿ ಸಂಖ್ಯೆ: ಸನಿ34/ನೋಂದಣಿ/455/5802/1984–85, ದಿನಾಂಕ: 28–03–1985ರನ್ವಯ ನೋಂದಣಿಯಾಗಿರುತ್ತದೆ. ಸಂಘದ ಕಾರ್ಯವ್ಯಾಪ್ತಿಯ ತಾಲ್ಲೂಕು ಮಟ್ಟಕ್ಕಿಂತ ಕಡಿಮೆ ಇರುತ್ತದೆ. ಸದರಿ ಸಂಘವು ತನ್ನ ಉಪನಿಯಮಗಳ ಉದ್ದೇಶಗಳಿಗನುಗುಣವಾಗಿ ಕಾರ್ಯನಿರ್ವಹಿಸದೇ ಸ್ಥಗಿತಗೊಂಡ ಕಾರಣ ಸಂಘವನ್ನು ಸಮಾಪನೆಗೊಳಿಸುವಂತೆ ತಿಪಟೂರು ಉಪವಿಭಾಗದ ಸಹಾಯಕ ನಿಬಂಧಕರು ಈ ಕಛೇರಿಗೆ ಪ್ರಸ್ತಾವನೆ ಸಲ್ಲಿಸಲಾಗಿದ್ದ ಹಿನ್ನೆಲೆಯಲ್ಲಿ ಉಲ್ಲೇಖ (2)ರ ಈ ಕಛೇರಿ ಆದೇಶದ ರೀತ್ಯಾ ಸಂಘವನ್ನು ಸಮಾಪನೆಗೊಳಿಸಿ ಸಹಕಾರ ಅಭಿವೃದ್ಧಿ ಅಧಿಕಾರಿ, ತುರುವೇಕೆರೆ ತಾಲ್ಲೂಕು ಇವರನ್ನು ಸಮಾಪನಾಧಿಕಾರಿಯನ್ನಾಗಿ ನೇಮಿಸಲಾಗಿತ್ತು. ಸಮಾಪನಾಧಿಕಾರಿಗಳು ಸಂಘದ ಪ್ರಭಾರವನ್ನು ಪಡೆದು, ಲೆಕ್ಕಪರಿಶೋಧನಾ ವರದಿ, ಸಂಘದ ಆಸ್ತಿ–ಜವಾಬ್ದಾರಿ ತ:ಖ್ತೆ ರೀತ್ಯಾ ವಿಲೇವಾರಿ ಮಾಡಿರುತ್ತಾರೆ. ಸಮಾಪನಾಧಿಕಾರಿಗಳು ದಿನಾಂಕ: 15–03–2016ರಂದು ನಡೆದ ಅಂತಿಮ ಸಭೆಯಲ್ಲಿ ನಿರ್ಣಯ ಕೈಗೊಂಡು ಅದರಂತೆ, ಆಸ್ತಿ–ಜವಾಬ್ದಾರಿಯನ್ನು ವಿಲೇವಾರಿ ಮಾಡಿರುತ್ತಾರೆ. ದಿನಾಂಕ: 15–03–2016ಕ್ಕೆ ಆಸ್ತಿ ಜವಾಬ್ದಾರಿ ಶೂನ್ಯವಾಗಿರುತ್ತದೆ. ಮತ್ತು ಸಂಘದ ನೋಂದಣಿ ಕ್ರಮಾಂಕವನ್ನು ರದ್ದುಪಡಿಸಲು ತೀರ್ಮಾನಿಸಿ ಪ್ರಸ್ತಾವನೆಯನ್ನು ಸಹಕಾರ ಸಂಘಗಳ ಸಹಾಯಕ ನಿಬಂಧಕರು, ತಿಪಟೂರು ಉಪವಿಭಾಗರವರಿಗೆ ಸಲ್ಲಿಸಿದ್ದು, ಉಲ್ಲೇಖ (3)ರ ಪತ್ರದಲ್ಲಿ ಈ ಕಛೇರಿಗೆ ಶಿಫಾರಸ್ಸು ಮಾಡಿರುತ್ತಾರೆ. ಸಹಕಾರ ಅಭಿವೃದ್ಧಿ ಅಧಿಕಾರಿ, ತುರುವೇಕೆರೆ ತಾಲ್ಲೂಕುರವರ ಶಿಫಾರಸ್ಸು ಮತ್ತು ಸಹಕಾರ ಸಂಘಗಳ ಸಹಾಯಕ

ನಿಬಂಧಕರ ಶಿಫಾರಸ್ಸು ಹಾಗೂ ದಿನಾಂಕ: 15–03–2016ರಂದು ನಡೆಸಿದ ಸಮಾಪನಾಧಿಕಾರಿ ಸಭೆಯ ನಡವಳಿಕೆ ಮತ್ತು ಶೂನ್ಯಗೊಳಿಸಿರುವ ಆಸ್ತಿ–ಜವಾಬ್ದಾರಿ ಸಲ್ಲಿಸಿರುವ ಕಾರಣ ಸಂಘವನ್ನು ಮುಂದುವರೆಸುವುದರಿಂದ ಸದಸ್ಯರಿಗಾಗಲೀ ಸಾರ್ವಜನಿಕರಾಗಲೀ ಯಾವುದೇ ಪ್ರಯೋಜನವಿಲ್ಲವೆಂದು ಮನಗಂಡು ಈ ಸಹಕಾರ ಸಂಘದ ನೋಂದಣಿ ಕ್ರಮಾಂಕವನ್ನು ರದ್ದುಪಡಿಸುವುದು ಸೂಕ್ತವೆಂದು ಪರಿಗಣಿಸಿ ಈ ಕೆಳಕಂಡ ಆದೇಶ ಹೊರಡಿಸಲಾಗಿದೆ.

**: ಆದೇಶ :**

**ಸಂಖ್ಯೆ: ಡಿಆರ್‌ಟಿ:ಡಿಎಲ್‌ಎಸ್:03/2006–07, ದಿನಾಂಕ: 29–03–2016**

ಪ್ರಸ್ತಾವನೆಯಲ್ಲಿ ವಿವರಿಸಿರುವಂತೆ, ಕರ್ನಾಟಕ ಸಹಕಾರ ಸಂಘಗಳ ಕಾಯ್ದೆ, 1959ರ ಕಲಂ 75 ರನ್ವಯ ಹಾಗೂ ಸರ್ಕಾರದ ಅಧಿಸೂಚನೆ ಸಂಖ್ಯೆ: ಸಿಒ/139/ಸಿಎಲ್‌ಎಂ:2010, ದಿನಾಂಕ: 17–02–2011ರನ್ವಯ ದತ್ತವಾಗಿರುವ ಅಧಿಕಾರವನ್ನು ಚಲಾಯಿಸುತ್ತಾ, ಜಿ.ಪ್ರಕಾಶ್, ಸಹಕಾರ ಸಂಘಗಳ ಉಪ ನಿಬಂಧಕರು, ತುಮಕೂರು ಜಿಲ್ಲೆ, ತುಮಕೂರು ಆದ ನಾನು, ಸಮಾಪನೆಯಲ್ಲಿರುವ ಹಾಲು ಉತ್ಪಾದಕರ ಸಹಕಾರ ಸಂಘ ನಿ., ತಾಳಕೆರೆ, ತುರುವೇಕೆರೆ ತಾಲ್ಲೂಕು ಈ ಸಹಕಾರ ಸಂಘದ ನೋಂದಣಿ ಸಂಖ್ಯೆ: ಸನಿ34/ನೋಂದಣಿ/455/5802/1984–85, ದಿನಾಂಕ: 28–03–1985 ರದ್ದುಪಡಿಸಿ ಕೂಡಲೇ ಜಾರಿಗೆ ಬರುವಂತೆ ಆದೇಶ ಹೊರಡಿಸಲಾಗಿದೆ.

ಈ ಆದೇಶದ ದಿನಾಂಕದಿಂದ ಸಂಘವು ತನ್ನ ಅಸ್ತಿತ್ವವನ್ನು ಕಳೆದುಕೊಂಡು ಪೂರ್ಣವಾಗಿ ವಿಸರ್ಜಿತವಾಗಿದೆ ಎಂದು ಪರಿಗಣಿಸತಕ್ಕದ್ದು. ಈ ಸಹಕಾರ ಸಂಘಕ್ಕೆ ಸಂಬಂಧಿಸಿದ ದಾಖಲಾತಿಗಳನ್ನು ಸಹಕಾರ ಸಂಘಗಳ ನಿಯಮಗಳು, 1960ರ ನಿಯಮ 33(ಒ)ರನ್ವಯ 03 ವರ್ಷಗಳ ಕಾಲ ಈ ಸಂಘದ ವಿಶಿಷ್ಟ ದಾಖಲಾತಿಗಳನ್ನು ಸಹಕಾರ ಸಂಘಗಳ ಸಹಾಯಕ ನಿಬಂಧಕರು, ತಿಪಟೂರು ಇವರ ಕಾರ್ಯಾಲಯದಲ್ಲಿ ಕಾಯ್ದಿರಿಸತಕ್ಕದ್ದು.

ಈ ಆದೇಶವನ್ನು ನನ್ನ ಸ್ವ–ಸಹಿ ಮತ್ತು ಕಛೇರಿ ಮೊಹರಿನೊಂದಿಗೆ ದಿನಾಂಕ: 29–03–2016ರಂದು ನೀಡಿರುತ್ತೇನೆ.

**ಜಿ.ಪ್ರಕಾಶ್**

**P.R. 509** ಸಹಕಾರ ಸಂಘಗಳ ಉಪ ನಿಬಂಧಕರು

**SC – 10** ತುಮಕೂರು ಜಿಲ್ಲೆ, ತುಮಕೂರು.

## ಸಹಕಾರ ಇಲಾಖೆ

### ಸಹಕಾರ ಸಂಘಗಳ ಉಪ ನಿಬಂಧಕರು, ಮಿನಿ ವಿಧಾನಸೌಧ, ಕೊಠಡಿ ಸಂಖ್ಯೆ. 305, 2ನೇ ಮಹಡಿ, ತುಮಕೂರು ಜಿಲ್ಲೆ, ತುಮಕೂರು ಇವರ ಕಾರ್ಯಾಲಯದ ನಡವಳಿಕೆಗಳು

**ವಿಷಯ :** ಸಮಾಪನೆಗೊಂಡಿರುವ ಸೃಜನಶೀಲ ರೇಷ್ಮೆ ಕೈಮಗ್ಗ ನೇಕಾರರ ಉತ್ಪಾದನಾ ಮತ್ತು ಮಾರಾಟ ಸಹಕಾರ ಸಂಘ ನಿ., ಹಳೇಪಾಳ್ಯ, ತಿಪಟೂರು ತಾಲ್ಲೂಕು ಇದರ ನೋಂದಣಿ ರದ್ದುಪಡಿಸುವ ಕುರಿತು.

**ಉಲ್ಲೇಖ :** 1) ಸಹಕಾರ ಸಂಘಗಳ ಸಹಾಯಕ ನಿಬಂಧಕರು, ತಿಪಟೂರು ಉಪ ವಿಭಾಗ, ತಿಪಟೂರುರವರ ಪ್ರಸ್ತಾವನೆ ಪತ್ರದ ಸಂಖ್ಯೆ: ಸನಿ34/ಸಮಾಪನೆ/22/2010–11–2000, ದಿನಾಂಕ: 23–02–2016.

2) ಈ ಕಛೇರಿಯ ಸಮಾಪನಾ ಆದೇಶ ಸಂಖ್ಯೆ: ಡಿಆರ್‌ಟಿ:ಸಮಾಪನೆ:ಸಿ.ಆರ್–138/2014–15, ದಿನಾಂಕ: 19–09–2014.

3) ಸಮಾಪನಾಧಿಕಾರಿಗಳ ಪ್ರಸ್ತಾವನೆ ದಿನಾಂಕ: 23–02–2016.

4) ದಿನಾಂಕ: 17–03–2016ರ ಜಿಲ್ಲಾ ಮಟ್ಟದ ಪತ್ರಿಕೆಗಳಾದ ಏಕೇಶ್ ಪತ್ರಿಕೆ, ಪ್ರಜಾಯೋಗ ಮತ್ತು ತುಮಕೂರು ವಾರ್ತೆ ದಿನಪತ್ರಿಕೆಯಲ್ಲಿ ಸದರಿ ಸಂಘದ ಸದಸ್ಯರ ಗಮನಕ್ಕೆ ಪ್ರಕಟಿಸಿರುವಂತೆ.

**ಪ್ರಸ್ತಾವನೆ :**

ಸಮಾಪನೆಗೊಂಡಿರುವ ಸೃಜನಶೀಲ ರೇಷ್ಮೆ ಕೈಮಗ್ಗ ನೇಕಾರರ ಉತ್ಪಾದನಾ ಮತ್ತು ಮಾರಾಟ ಸಹಕಾರ ಸಂಘ ನಿ., ಹಳೇಪಾಳ್ಯ, ತಿಪಟೂರು ತಾಲ್ಲೂಕು ಈ ಸಹಕಾರ ಸಂಘವು ಸಹಕಾರ ಸಂಘಗಳ ಸಹಾಯಕ ನಿಬಂಧಕರು, ತಿಪಟೂರು ಉಪ ವಿಭಾಗ, ತಿಪಟೂರುರವರಿಗೆ ನೋಂದಾಯಿಸಲ್ಪಟಿದ್ದು, ನೋಂದಣಿ ಸಂಖ್ಯೆ: ಸನಿ–34/ನೋಂದಣಿ/ಆರ್‌ಸಿಎಸ್/39697/2010–11, ದಿನಾಂಕ: 09–06–2010ರನ್ವಯ ನೋಂದಣಿಯಾಗಿರುತ್ತದೆ. ಸಂಘದ ಕಾರ್ಯವ್ಯಾಪ್ತಿಯ ತಾಲ್ಲೂಕು ಮಟ್ಟಕ್ಕಿಂತ ಕಡಿಮೆ ಇರುತ್ತದೆ. ಸದರಿ ಸಂಘವು ತನ್ನ ಉಪನಿಯಮಗಳ ಉದ್ದೇಶಗಳಿಗನುಗುಣವಾಗಿ ಕಾರ್ಯನಿರ್ವಹಿಸದೇ ಸ್ಥಗಿತಗೊಂಡ ಕಾರಣ ಸಂಘವನ್ನು ಸಮಾಪನೆಗೊಳಿಸುವಂತೆ ತಿಪಟೂರು ಉಪವಿಭಾಗದ ಸಹಾಯಕ ನಿಬಂಧಕರು ಈ ಕಛೇರಿಗೆ ಪ್ರಸ್ತಾವನೆ ಸಲ್ಲಿಸಲಾಗಿದ್ದ ಹಿನ್ನೆಲೆಯಲ್ಲಿ ಉಲ್ಲೇಖ (2)ರ ಈ ಕಛೇರಿ ಆದೇಶದ ರೀತ್ಯಾ ಸಂಘವನ್ನು ಸಮಾಪನೆಗೊಳಿಸಿ ಸಹಕಾರ ಸಂಘಗಳ ನಿರೀಕ್ಷಕರು, ತಿಪಟೂರು ತಾಲ್ಲೂಕು ಇವರನ್ನು ಸಮಾಪನಾಧಿಕಾರಿಯನ್ನಾಗಿ ನೇಮಿಸಲಾಗಿತ್ತು. ಸಮಾಪನಾಧಿಕಾರಿಗಳು ಸಂಘದ ಪ್ರಭಾರವನ್ನು ಪಡೆದು, ಲೆಕ್ಕಪರಿಶೋಧನಾ ವರದಿ, ಸಂಘದ ಆಸ್ತಿ–ಜವಾಬ್ದಾರಿ ತ:ಖ್ತೆ ರೀತ್ಯಾ ವಿಲೇವಾರಿ ಮಾಡಿರುತ್ತಾರೆ. ಸಮಾಪನಾಧಿಕಾರಿಗಳು ದಿನಾಂಕ: 23–02–2016ರಂದು ನಡೆದ ಅಂತಿಮ ಸಭೆಯಲ್ಲಿ ನಿರ್ಣಯ ಕೈಗೊಂಡು ಅದರಂತೆ, ಆಸ್ತಿ–ಜವಾಬ್ದಾರಿಯನ್ನು ವಿಲೇವಾರಿ ಮಾಡಿರುತ್ತಾರೆ. ದಿನಾಂಕ: 23–02–2016ಕ್ಕೆ ಆಸ್ತಿ ಜವಾಬ್ದಾರಿ ಶೂನ್ಯವಾಗಿರುತ್ತದೆ. ಮತ್ತು ಸಂಘದ ನೋಂದಣಿ ಕ್ರಮಾಂಕವನ್ನು ರದ್ದುಪಡಿಸಲು ತೀರ್ಮಾನಿಸಿ ಪ್ರಸ್ತಾವೆಯನ್ನು ಸಹಕಾರ ಸಂಘಗಳ ಸಹಾಯಕ ನಿಬಂಧಕರು, ತಿಪಟೂರು ಉಪವಿಭಾಗರವರಿಗೆ ಸಲ್ಲಿಸಿದ್ದು, ಉಲ್ಲೇಖ (1)ರ ಪತ್ರದಲ್ಲಿ ಈ ಕಛೇರಿಗೆ ಶಿಫಾರಸ್ಸು ಮಾಡಿರುತ್ತಾರೆ. ಸಹಕಾರ ಸಂಘಗಳ ನಿರೀಕ್ಷಕರು, ತಿಪಟೂರು ತಾಲ್ಲೂಕುರವರ ಶಿಫಾರಸ್ಸು ಮತ್ತು ಸಹಕಾರ ಸಂಘಗಳ ಸಹಾಯಕ ನಿಬಂಧಕರ ಶಿಫಾರಸ್ಸು ಹಾಗೂ ದಿನಾಂಕ: 23–02–2016ರಂದು ನಡೆಸಿದ ಸಮಾಪನಾಧಿಕಾರಿ ಸಭೆಯ ನಡವಳಿಕೆ ಮತ್ತು ಶೂನ್ಯಗೊಳಿಸಿರುವ ಆಸ್ತಿ–ಜವಾಬ್ದಾರಿ ಸಲ್ಲಿಸಿರುವ ಕಾರಣ ಸಂಘವನ್ನು ಮುಂದುವರೆಸುವುದರಿಂದ ಸದಸ್ಯರಿಗಾಗಲೀ ಸಾರ್ವಜನಿಕರಾಗಲೀ ಯಾವುದೇ ಪ್ರಯೋಜನವಿಲ್ಲವೆಂದು ಮನಗಂಡು ಈ ಸಹಕಾರ ಸಂಘದ ನೋಂದಣಿ ಕ್ರಮಾಂಕವನ್ನು ರದ್ದುಪಡಿಸುವುದು ಸೂಕ್ತವೆಂದು ಪರಿಗಣಿಸಿ ಈ ಕೆಳಕಂಡ ಆದೇಶ ಹೊರಡಿಸಲಾಗಿದೆ.

: ಆದೇಶ :

**ಸಂಖ್ಯೆ: ಡಿಆರ್‌ಟಿ:ಸಮಾಪನೆ:ಸಿ.ಆರ್–138/2014–15, ದಿನಾಂಕ: 29–03–2016**

ಪ್ರಸ್ತಾವನೆಯಲ್ಲಿ ವಿವರಿಸಿರುವಂತೆ, ಕರ್ನಾಟಕ ಸಹಕಾರ ಸಂಘಗಳ ಕಾಯ್ದೆ, 1959ರ ಕಲಂ 75 ರನ್ವಯ ಹಾಗೂ ಸರ್ಕಾರದ ಅಧಿಸೂಚನೆ ಸಂಖ್ಯೆ: ಸಿಓ/139/ಸಿಎಲ್‌ಎಂ/2010, ದಿನಾಂಕ: 17–02–2011ರನ್ವಯ ಜಿ.ಪ್ರಕಾಶ್, ಸಹಕಾರ ಸಂಘಗಳ ಉಪ ನಿಬಂಧಕರು, ತುಮಕೂರು ಜಿಲ್ಲೆ, ತುಮಕೂರು ಆದ ನಾನು ನನಗೆ ದತ್ತವಾಗಿರುವ ಅಧಿಕಾರವನ್ನು ಚಲಾಯಿಸುತ್ತಾ, ತುಮಕೂರು ಜಿಲ್ಲೆ, ತುಮಕೂರು ಆದ ನಾನು ನನಗೆ ದತ್ತವಾಗಿರುವ ಅಧಿಕಾರವನ್ನು ಚಲಾಯಿಸುತ್ತಾ, ಸಮಾಪನೆಯಲ್ಲಿರುವ **ಸೃಜನಶೀಲ ರೇಷ್ಮೆ ಕೈಮಗ್ಗ ನೇಕಾರರ ಉತ್ಪಾದನಾ ಮತ್ತು ಮಾರಾಟ ಸಹಕಾರ ಸಂಘ** ನಿ., ಹಳೇಪಾಳ್ಯ, ತಿಪಟೂರು ತಾಲ್ಲೂಕು ಈ ಸಹಕಾರ ಸಂಘದ ನೋಂದಣಿ ಸಂಖ್ಯೆ: ಸನಿ–34/ನೋಂದಣಿ/ಆರ್‌ಸಿಎಸ್/39697/2010–11, ದಿನಾಂಕ: 09–06–2010 ರದ್ದುಪಡಿಸಿ ಕೂಡಲೇ ಜಾರಿಗೆ ಬರುವಂತೆ ಆದೇಶ ಹೊರಡಿಸಲಾಗಿದೆ.

ಈ ಆದೇಶದ ದಿನಾಂಕದಿಂದ ಸಂಘವು ತನ್ನ ಅಸ್ತಿತ್ವವನ್ನು ಕಳೆದುಕೊಂಡು ಪೂರ್ಣವಾಗಿ ವಿಸರ್ಜಿತವಾಗಿದೆ ಎಂದು ಪರಿಗಣಿಸತಕ್ಕದ್ದು. ಈ ಸಹಕಾರ ಸಂಘಕ್ಕೆ ಸಂಬಂಧಿಸಿದ ದಾಖಲಾತಿಗಳನ್ನು ಸಹಕಾರ ಸಂಘಗಳ ನಿಯಮಗಳು, 1960ರ ನಿಯಮ 33(ಒ)ರನ್ವಯ 03 ವರ್ಷಗಳ ಕಾಲ ಈ ಸಂಘದ ವಿಶಿಷ್ಟ ದಾಖಲಾತಿಗಳನ್ನು ಸಹಕಾರ ಸಂಘಗಳ ಸಹಾಯಕ ನಿಬಂಧಕರು, ತಿಪಟೂರು ಇವರ ಕಾರ್ಯಾಲಯದಲ್ಲಿ ಕಾಯ್ದಿರಿಸತಕ್ಕದ್ದು.

ಈ ಆದೇಶವನ್ನು ನನ್ನ ಸ್ವ–ಸಹಿ ಮತ್ತು ಕಛೇರಿ ಮೊಹರಿನೊಂದಿಗೆ ದಿನಾಂಕ: 29–03–2016ರಂದು ನೀಡಿರುತ್ತೇನೆ.

**ಜಿ.ಪ್ರಕಾಶ್**

P.R. 510 ಸಹಕಾರ ಸಂಘಗಳ ಉಪ ನಿಬಂಧಕರು

SC – 10 ತುಮಕೂರು ಜಿಲ್ಲೆ, ತುಮಕೂರು.

**ಸಹಕಾರ ಇಲಾಖೆ**

**ಸಹಕಾರ ಸಂಘಗಳ ಉಪ ನಿಬಂಧಕರು, ಮಿನಿ ವಿಧಾನಸೌಧ, ಕೊಠಡಿ ಸಂಖ್ಯೆ. 305, 2ನೇ ಮಹಡಿ, ತುಮಕೂರು ಜಿಲ್ಲೆ, ತುಮಕೂರು ಇವರ ಕಾರ್ಯಾಲಯದ ನಡವಳಿಕೆಗಳು**

**ವಿಷಯ :** ಸಮಾಪನೆಗೊಂಡಿರುವ ಎಣ್ಣೆ ಬೀಜ ಬೆಳೆಗಾರರ ಸಹಕಾರ ಸಂಘ ನಿ., ರಾಜವಂತಿ, ಪಾವಗಡ ತಾಲ್ಲೂಕು ಈ ಸಂಘದ ನೋಂದಣಿ ರದ್ದುಪಡಿಸುವ ಕುರಿತು.

**ಉಲ್ಲೇಖ :**
1) ಸಹಕಾರ ಸಂಘಗಳ ಸಹಾಯಕ ನಿಬಂಧಕರು, ಮಧುಗಿರಿ ಉಪ ವಿಭಾಗ, ಮಧುಗಿರಿರವರ ಪ್ರಸ್ತಾವನೆ ಪತ್ರದ ಸಂಖ್ಯೆ: ಸನಿ33/ನೋಂ.ರ/88/2015–16, ದಿನಾಂಕ: 31–03–2016.
2) ಈ ಕಛೇರಿಯ ಸಮಾಪನಾ ಆದೇಶ ಸಂಖ್ಯೆ: ಡಿಆರ್‌ಟಿ:ಎಲ್‌ಕ್ಯೂಡಿ:ಸಿ.ಆರ್–07/2010–11, ದಿನಾಂಕ: 10–12–2010.
3) ಸಮಾಪನಾಧಿಕಾರಿಗಳ ಪ್ರಸ್ತಾವನೆ ದಿನಾಂಕ: 31–03–2016.
4) ದಿನಾಂಕ: 17–03–2016ರ ಜಿಲ್ಲಾ ಮಟ್ಟದ ಪತ್ರಿಕೆಗಳಾದ ಏಕೇಶ್ ಪತ್ರಿಕೆ, ಪ್ರಜಾಯೋಗ ಮತ್ತು ತುಮಕೂರು ವಾರ್ತೆ ದಿನಪತ್ರಿಕೆಯಲ್ಲಿ ಸದರಿ ಸಂಘದ ಸದಸ್ಯರ ಗಮನಕ್ಕೆ ಪ್ರಕಟಿಸಿರುವಂತೆ.

**ಪ್ರಸ್ತಾವನೆ :**

ಸಮಾಪನೆಗೊಂಡಿರುವ ಎಣ್ಣೆ ಬೀಜ ಬೆಳೆಗಾರರ ಸಹಕಾರ ಸಂಘ ನಿ., ರಾಜವಂತಿ, ಪಾವಗಡ ತಾಲ್ಲೂಕು ಈ ಸಹಕಾರ ಸಂಘವು ಸಹಕಾರ ಸಂಘಗಳ ಸಹಾಯಕ ನಿಬಂಧಕರು, ಮಧುಗಿರಿ ಉಪ ವಿಭಾಗ, ಮಧುಗಿರಿರವರಿಂದ ನೋಂದಣಿ ಸಂಖ್ಯೆ: ಸನಿ–33/ನೋಂದಣಿ/ಆರ್‌ಜಿಡಿ/17829/1991–92, ದಿನಾಂಕ: 22–10–1991ರನ್ವಯ ನೋಂದಣಿಯಾಗಿರುತ್ತದೆ. ಸಂಘದ ಕಾರ್ಯವ್ಯಾಪ್ತಿಯ ತಾಲ್ಲೂಕು ಮಟ್ಟಕ್ಕಿಂತ ಕಡಿಮೆ ಇರುತ್ತದೆ. ಸದರಿ ಸಂಘವು ತನ್ನ ಉಪನಿಯಮಗಳ ಉದ್ದೇಶಗಳಿಗನುಗುಣವಾಗಿ ಸದಸ್ಯರ ಹಿತಕ್ಕಾಗಿ ಕಾರ್ಯನಿರ್ವಹಿಸದೇ ಸ್ಥಗಿತಗೊಂಡ ಕಾರಣ ಸಂಘವನ್ನು ಸಮಾಪನೆಗೊಳಿಸುವಂತೆ ಮಧುಗಿರಿ ಉಪವಿಭಾಗದ ಸಹಕಾರ ಸಂಘಗಳ ಸಹಾಯಕ ನಿಬಂಧಕರು ಈ ಕಛೇರಿಗೆ ಪ್ರಸ್ತಾವನೆ ಸಲ್ಲಿಸಲಾಗಿದ್ದ ಹಿನ್ನೆಲೆಯಲ್ಲಿ ಉಲ್ಲೇಖ (2)ರ ಈ ಕಛೇರಿ ಆದೇಶದ ರೀತ್ಯಾ ಸಂಘವನ್ನು ಸಮಾಪನೆಗೊಳಿಸಿ ಸಹಕಾರ ಸಂಘಗಳ ನಿರೀಕ್ಷಕರು, ಸಹಕಾರ ಅಭಿವೃದ್ಧಿ ಅಧಿಕಾರಿ ಕಛೇರಿ, ಪಾವಗಡ ತಾಲ್ಲೂಕು, ಇವರನ್ನು ಸಮಾಪನಾಧಿಕಾರಿಯನ್ನಾಗಿ ನೇಮಿಸಲಾಗಿತ್ತು.

ಸಮಪನಾಧಿಕಾರಿಗಳು ಸಂಘದ ಪ್ರಭಾರವನ್ನು ಪಡೆದು, ಲೆಕ್ಕಪರಿಶೋಧನಾ ವರದಿ, ಸಂಘದ ಆಸ್ತಿ–ಜವಾಬ್ದಾರಿ ತ:ಖ್ತೆ ರೀತ್ಯಾ ವಿಲೇವಾರಿ ಮಾಡಿರುತ್ತಾರೆ. ಸಮಪನಾಧಿಕಾರಿಗಳು ದಿನಾಂಕ: 31–03–2016ರಂದು ನಡೆದ ಅಂತಿಮ ಸಭೆಯಲ್ಲಿ ನಿರ್ಣಯ ಕೈಗೊಂಡು ಅದರಂತೆ, ಆಸ್ತಿ–ಜವಾಬ್ದಾರಿಯನ್ನು ವಿಲೇವಾರಿ ಮಾಡಿರುತ್ತಾರೆ. ದಿನಾಂಕ: 31–03–2016ಕ್ಕೆ ಆಸ್ತಿ ಜವಾಬ್ದಾರಿ ಶೂನ್ಯಗೊಳಿಸಿ ಹಾಗೂ ಸಂಘದ ನೋಂದಣಿ ಕ್ರಮಾಂಕವನ್ನು ರದ್ದುಪಡಿಸಲು ತೀರ್ಮಾನಿಸಿ ಪ್ರಸ್ತಾವನೆಯನ್ನು ಸಹಕಾರ ಸಂಘಗಳ ಸಹಾಯಕ ನಿಬಂಧಕರು, ಮಧುಗಿರಿ ಉಪವಿಭಾಗರವರಿಗೆ ಸಲ್ಲಿಸಿದ್ದು, ಉಲ್ಲೇಖ (1)ರ ಪತ್ರದಲ್ಲಿ ಈ ಕಛೇರಿಗೆ ಶಿಫಾರಸ್ಸು ಮಾಡಿರುತ್ತಾರೆ. ಸಮಾಪನಾಧಿಕಾರಿ ಹಾಗೂ ಸಹಕಾರ ಸಂಘಗಳ ನಿರೀಕ್ಷಕರು ರವರ ಶಿಫಾರಸ್ಸು ಮತ್ತು ಸಹಕಾರ ಸಂಘಗಳ ಸಹಾಯಕ ನಿಬಂಧಕರು, ಮಧುಗಿರಿ ಉಪ ವಿಭಾಗ ಇವರ ಶಿಫಾರಸ್ಸು ಹಾಗೂ ದಿನಾಂಕ: 31–03–2016ರಂದು ನಡೆಸಿದ ಸಮಾಪನಾಧಿಕಾರಿ ಸಭೆಯ ನಡವಳಿಕೆ ಮತ್ತು ಶೂನ್ಯಗೊಳಿಸಿರುವ ಆಸ್ತಿ–ಜವಾಬ್ದಾರಿ ಸಲ್ಲಿಸಿರುವ ಕಾರಣ ಸಂಘವನ್ನು ಮುಂದುವರೆಸುವುದರಿಂದ ಸದಸ್ಯರಿಗಾಗಲೀ ಸಾರ್ವಜನಿಕರಾಗಲೀ ಯಾವುದೇ ಪ್ರಯೋಜನವಿಲ್ಲವೆಂದು ಮನಗಂಡು ಈ ಸಹಕಾರ ಸಂಘದ ನೋಂದಣಿ ಕ್ರಮಾಂಕವನ್ನು ರದ್ದುಪಡಿಸುವುದು ಸೂಕ್ತವೆಂದು ಪರಿಗಣಿಸಿ ಈ ಕೆಳಕಂಡ ಆದೇಶ ಹೊರಡಿಸಲಾಗಿದೆ.

: ಆದೇಶ :

**ಸಂಖ್ಯೆ: ಡಿಆರ್‌ಟಿ:ಎಲ್‌ಕ್ಯೂಡಿ:ಸಿ.ಆರ್–07/2010–11, ದಿನಾಂಕ: 31–03–2016**

ಪ್ರಸ್ತಾವನೆಯಲ್ಲಿ ವಿವರಿಸಿರುವಂತೆ, ಕರ್ನಾಟಕ ಸಹಕಾರ ಸಂಘಗಳ ಕಾಯ್ದೆ, 1959ರ ಕಲಂ 75 ರನ್ವಯ ಹಾಗೂ ಸರ್ಕಾರದ ಅಧಿಸೂಚನೆ ಸಂಖ್ಯೆ: ಸಿಒ/139/ಸಿಎಲ್ಎಂ/2010, ದಿನಾಂಕ: 17-02-2011ರನ್ವಯ ದತ್ತವಾಗಿರುವ ಅಧಿಕಾರವನ್ನು ಚಲಾಯಿಸುತ್ತಾ, ಜಿ.ಪ್ರಕಾಶ್, ಸಹಕಾರ ಸಂಘಗಳ ಉಪ ನಿಬಂಧಕರು, ತುಮಕೂರು ಜಿಲ್ಲೆ, ತುಮಕೂರು ಆದ ನಾನು ನನಗೆ ಸಮಾಪನೆಯಲ್ಲಿರುವ ರಾಜವಂತಿ ಎಣ್ಣೆ ಬೀಜ ಬೆಳೆಗಾರರ ಸಹಕಾರ ಸಂಘ ನಿ., ಈ ಸಹಕಾರ ಸಂಘದ ನೋಂದಣಿ ಸಂಖ್ಯೆ: ಸನಿ–33/ನೋಂದಣಿ/ಆರ್‌ಜಿಡಿ/17829/1991–92, ದಿನಾಂಕ: 22–10–1991 ರದ್ದುಪಡಿಸಿ ಕೂಡಲೇ ಜಾರಿಗೆ ಬರುವಂತೆ ಆದೇಶ ಹೊರಡಿಸಲಾಗಿದೆ.

ಈ ಆದೇಶದ ದಿನಾಂಕದಿಂದ ಸಂಘವು ತನ್ನ ಅಸ್ತಿತ್ವವನ್ನು ಕಳೆದುಕೊಂಡು ಪೂರ್ಣವಾಗಿ ವಿಸರ್ಜಿತವಾಗಿದೆ ಎಂದು ಪರಿಗಣಿಸತಕ್ಕದ್ದು. ಈ ಸಹಕಾರ ಸಂಘಕ್ಕೆ ಸಂಬಂಧಿಸಿದ ದಾಖಲಾತಿಗಳನ್ನು ಸಹಕಾರ ಸಂಘಗಳ ನಿಯಮಗಳು, 1960ರ ನಿಯಮ 33(ಒ)ರನ್ವಯ 03 ವರ್ಷಗಳ ಕಾಲ ಈ ಸಂಘದ ವಿಶಿಷ್ಟ ದಾಖಲಾತಿಗಳನ್ನು ಸಹಕಾರ ಸಂಘಗಳ ಸಹಾಯಕ ನಿಬಂಧಕರು, ಮಧುಗಿರಿ ಉಪವಿಭಾಗ ಇವರ ಕಾರ್ಯಾಲಯದಲ್ಲಿ ಕಾಯ್ದಿರಿಸತಕ್ಕದ್ದು.

ಈ ಆದೇಶವನ್ನು ನನ್ನ ಸ್ವ–ಸಹಿ ಮತ್ತು ಕಛೇರಿ ಮೊಹರಿನೊಂದಿಗೆ ದಿನಾಂಕ: 31–03–2016ರಂದು ನೀಡಿರುತ್ತೇನೆ.

**ಜಿ.ಪ್ರಕಾಶ್**
ಸಹಕಾರ ಸಂಘಗಳ ಉಪ ನಿಬಂಧಕರು
ತುಮಕೂರು ಜಿಲ್ಲೆ, ತುಮಕೂರು.

P.R. 511
SC – 10

## ಸಹಕಾರ ಇಲಾಖೆ

## ಸಹಕಾರ ಸಂಘಗಳ ಉಪ ನಿಬಂಧಕರು, ಮಿನಿ ವಿಧಾನಸೌಧ, ಕೊಠಡಿ ಸಂಖ್ಯೆ 305, 2ನೇ ಮಹಡಿ, ತುಮಕೂರು ಜಿಲ್ಲೆ, ತುಮಕೂರು ಇವರ ಕಾರ್ಯಾಲಯದ ನಡವಳಿಕೆಗಳು

**ವಿಷಯ :** ಸಮಾಪನೆಗೊಂಡಿರುವ ಹಾಲು ಉತ್ಪಾದಕರ ಮಹಿಳಾ ಸಹಕಾರ ಸಂಘ ನಿ., ಸಂಕಾಪುರ, ಮಧುಗಿರಿ ತಾಲ್ಲೂಕು ಈ ಸಂಘದ ನೋಂದಣಿ ರದ್ದುಪಡಿಸುವ ಕುರಿತು.

**ಉಲ್ಲೇಖ :** 1) ಸಹಕಾರ ಸಂಘಗಳ ಸಹಾಯಕ ನಿಬಂಧಕರು, ಮಧುಗಿರಿ ಉಪ ವಿಭಾಗ, ಮಧುಗಿರಿರವರ ಪ್ರಸ್ತಾವನೆ ಪತ್ರದ ಸಂಖ್ಯೆ: ಸನಿ33/ನೋಂ.ರ/ /2015–16, ದಿನಾಂಕ: 29–03–2016.
2) ಈ ಕಛೇರಿಯ ಸಮಾಪನಾ ಆದೇಶ ಸಂಖ್ಯೆ: ಡಿಆರ್‌ಟಿ:ಎಲ್‌ಕ್ಯೂಡಿ:ಸಿ.ಆರ್–130/2011–12, ದಿನಾಂಕ: 29–02–2012.
3) ಸಮಾಪನಾಧಿಕಾರಿಗಳ ಪ್ರಸ್ತಾವೆ ದಿನಾಂಕ: 28–03–2016.
4) ದಿನಾಂಕ: 17–03–2016ರ ಜಿಲ್ಲಾ ಮಟ್ಟದ ಪತ್ರಿಕೆಗಳಾದ ಏಕೇಶ್ ಪತ್ರಿಕೆ, ಪ್ರಜಾಯೋಗ ಮತ್ತು ತುಮಕೂರು ವಾರ್ತೆ ದಿನಪತ್ರಿಕೆಯಲ್ಲಿ ಸದರಿ ಸಂಘದ ಸದಸ್ಯರ ಗಮನಕ್ಕೆ ಪ್ರಕಟಿಸಿರುವಂತೆ.

**ಪ್ರಸ್ತಾವನೆ :**

ಸಮಾಪನೆಗೊಂಡಿರುವ ಹಾಲು ಉತ್ಪಾದಕರ ಮಹಿಳಾ ಸಹಕಾರ ಸಂಘ ನಿ., ಸಂಕಾಪುರ, ಮಧುಗಿರಿ ತಾಲ್ಲೂಕು ಈ ಸಹಕಾರ ಸಂಘವು ಸಹಕಾರ ಸಂಘಗಳ ಸಹಾಯಕ ನಿಬಂಧಕರು, ಮಧುಗಿರಿ ಉಪ ವಿಭಾಗ, ಮಧುಗಿರಿರವರಿಂದ ನೋಂದಣಿ ಸಂಖ್ಯೆ: ಸನಿ–33/ನೋಂದಣಿ/ಜೆಒಕ್ಯೂ/38217/2009–10, ದಿನಾಂಕ: 30–09–2009ರನ್ವಯ ನೋಂದಣಿಯಾಗಿರುತ್ತದೆ. ಸಂಘದ ಕಾರ್ಯವ್ಯಾಪ್ತಿಯ ತಾಲ್ಲೂಕು ಮಟ್ಟಕ್ಕಿಂತ ಕಡಿಮೆ ಇರುತ್ತದೆ. ಸದರಿ ಸಂಘವು ತನ್ನ ಉಪನಿಯಮಗಳ ಉದ್ದೇಶಗಳಿಗನುಗುಣವಾಗಿ ಸದಸ್ಯರ ಹಿತಕ್ಕಾಗಿ ಕಾರ್ಯನಿರ್ವಹಿಸದೇ ಸ್ಥಗಿತಗೊಂಡ ಕಾರಣ ಸಂಘವನ್ನು ಸಮಾಪನೆಗೊಳಿಸುವಂತೆ ಮಧುಗಿರಿ ಉಪವಿಭಾಗದ ಸಹಕಾರ ಸಂಘಗಳ ಸಹಾಯಕ ನಿಬಂಧಕರು ಈ ಕಛೇರಿಗೆ ಪ್ರಸ್ತಾವೆ ಸಲ್ಲಿಸಲಾಗಿದ್ದ ಹಿನ್ನೆಲೆಯಲ್ಲಿ ಉಲ್ಲೇಖ (2)ರ ಈ ಕಛೇರಿ ಆದೇಶದ ರೀತ್ಯಾ ಸಂಘವನ್ನು ಸಮಾಪನೆಗೊಳಿಸಿ ಮಾರಾಟಾಧಿಕಾರಿ, ಸಹಕಾರ ಸಂಘಗಳ ಸಹಾಯಕ ನಿಬಂಧಕರ ಕಛೇರಿ, ಮಧುಗಿರಿ ಉಪವಿಭಾಗ, ಮಧುಗಿರಿ ಇವರನ್ನು ಸಮಾಪನಾಧಿಕಾರಿಯನ್ನಾಗಿ ನೇಮಿಸಲಾಗಿತ್ತು.

ಸಮಾಪನಾಧಿಕಾರಿಗಳು ಸಂಘದ ಪ್ರಭಾರವನ್ನು ಪಡೆದು, ಲೆಕ್ಕಪರಿಶೋಧನಾ ವರದಿ, ಸಂಘದ ಆಸ್ತಿ–ಜವಾಬ್ದಾರಿ ತ:ಖ್ತೆ ರೀತ್ಯಾ ವಿಲೇವಾರಿ ಮಾಡಿರುತ್ತಾರೆ. ಸಮಾಪನಾಧಿಕಾರಿಗಳು ದಿನಾಂಕ: 28–03–2016ರಂದು ನಡೆದ ಅಂತಿಮ ಸಭೆಯಲ್ಲಿ ನಿರ್ಣಯ ಕೈಗೊಂಡು ಅದರಂತೆ, ಆಸ್ತಿ–ಜವಾಬ್ದಾರಿಯನ್ನು ವಿಲೇವಾರಿ ಮಾಡಿರುತ್ತಾರೆ. ದಿನಾಂಕ: 28–03–2016ಕ್ಕೆ ಆಸ್ತಿ ಜವಾಬ್ದಾರಿ ಶೂನ್ಯಗೊಳಿಸಿ ಹಾಗೂ ಸಂಘದ ನೋಂದಣಿ ಕ್ರಮಾಂಕವನ್ನು ರದ್ದುಪಡಿಸಲು ತೀರ್ಮಾನಿಸಿ ಪ್ರಸ್ತಾವನೆಯನ್ನು ಸಹಕಾರ ಸಂಘಗಳ ಸಹಾಯಕ ನಿಬಂಧಕರು, ಮಧುಗಿರಿ ಉಪವಿಭಾಗರವರಿಗೆ ಸಲ್ಲಿಸಿದ್ದು, ಉಲ್ಲೇಖ (1)ರ ಪತ್ರದಲ್ಲಿ ಈ ಕಛೇರಿಗೆ ಶಿಫಾರಸ್ಸು ಮಾಡಿರುತ್ತಾರೆ. ಸಮಾಪನಾಧಿಕಾರಿ ಹಾಗೂ ಮಾರಾಟಾಧಿಕಾರಿ, ಸಹಕಾರ ಸಂಘಗಳ ಸಹಾಯಕ ನಿಬಂಧಕರ ಕಛೇರಿ, ಮಧುಗಿರಿ ಉಪವಿಭಾಗ, ಮಧುಗಿರಿರವರ ಶಿಫಾರಸ್ಸು ಮತ್ತು ಸಹಕಾರ ಸಂಘಗಳ ಸಹಾಯಕ ನಿಬಂಧಕರು, ಮಧುಗಿರಿ ಉಪ ವಿಭಾಗ ಇವರ ಶಿಫಾರಸ್ಸು ಹಾಗೂ ದಿನಾಂಕ: 28–03–2016ರಂದು ನಡೆಸಿದ ಸಮಾಪನಾಧಿಕಾರಿ ಸಭೆಯ ನಡವಳಿಕೆ ಮತ್ತು ಶೂನ್ಯಗೊಳಿಸಿರುವ ಆಸ್ತಿ–ಜವಾಬ್ದಾರಿ ಸಲ್ಲಿಸಿರುವ ಕಾರಣ ಸಂಘವನ್ನು ಮುಂದುವರೆಸುವುದರಿಂದ ಸದಸ್ಯರಿಗಾಗಲೀ ಸಾರ್ವಜನಿಕರಾಗಲೀ ಯಾವುದೇ ಪ್ರಯೋಜನವಿಲ್ಲವೆಂದು ಮನಗಂಡು ಈ ಸಹಕಾರ ಸಂಘದ ನೋಂದಣಿ ಕ್ರಮಾಂಕವನ್ನು ರದ್ದುಪಡಿಸುವುದು ಸೂಕ್ತವೆಂದು ಪರಿಗಣಿಸಿ ಈ ಕೆಳಕಂಡ ಆದೇಶ ಹೊರಡಿಸಲಾಗಿದೆ.

**: ಆದೇಶ :**

**ಸಂಖ್ಯೆ: ಡಿಆರ್‌ಟಿ:ಎಲ್‌ಕ್ಯೂಡಿ:ಸಿ.ಆರ್–130/2011–12, ದಿನಾಂಕ: 31–03–2016**

ಪ್ರಸ್ತಾವನೆಯಲ್ಲಿ ವಿವರಿಸಿರುವಂತೆ, ಕರ್ನಾಟಕ ಸಹಕಾರ ಸಂಘಗಳ ಕಾಯ್ದೆ, 1959ರ ಕಲಂ 75 ರನ್ವಯ ಹಾಗೂ ಸರ್ಕಾರದ ಅಧಿಸೂಚನೆ ಸಂಖ್ಯೆ: ಸಿಒ/139/ಸಿಎಲ್ಎಂ/2010, ದಿನಾಂಕ: 17-02-2011ರನ್ವಯ ದತ್ತವಾಗಿರುವ ಅಧಿಕಾರವನ್ನು ಚಲಾಯಿಸುತ್ತಾ, ಜಿ.ಪ್ರಕಾಶ್, ಸಹಕಾರ ಸಂಘಗಳ ಉಪ ನಿಬಂಧಕರು, ತುಮಕೂರು ಜಿಲ್ಲೆ, ತುಮಕೂರು ಆದ ನಾನು, ನನಗೆ ಸಮಾಪನೆಯಲ್ಲಿರುವ ಹಾಲು ಉತ್ಪಾದಕರ ಮಹಿಳಾ ಸಹಕಾರ ಸಂಘ ನಿ., ಸಂಕಾಪುರ, ಮಧುಗಿರಿ ತಾಲ್ಲೂಕು ಈ ಸಹಕಾರ ಸಂಘದ ನೋಂದಣಿ ಸಂಖ್ಯೆ: ಸನಿ–33/ಎಂ.ಕೆ.ಟಿ/ನೋಂದಣಿ/ಜೆಒಕ್ಯೂ/38217/2009–10, ದಿನಾಂಕ: 30–09–2009 ರದ್ದುಪಡಿಸಿ ಕೂಡಲೇ ಜಾರಿಗೆ ಬರುವಂತೆ ಆದೇಶ ಹೊರಡಿಸಲಾಗಿದೆ.

ಈ ಆದೇಶದ ದಿನಾಂಕದಿಂದ ಸಂಘವು ತನ್ನ ಅಸ್ತಿತ್ವವನ್ನು ಕಳೆದುಕೊಂಡು ಪೂರ್ಣವಾಗಿ ವಿಸರ್ಜಿತವಾಗಿದೆ ಎಂದು ಪರಿಗಣಿಸತಕ್ಕದ್ದು. ಈ ಸಹಕಾರ ಸಂಘಕ್ಕೆ ಸಂಬಂಧಿಸಿದ ದಾಖಲಾತಿಗಳನ್ನು ಸಹಕಾರ ಸಂಘಗಳ ನಿಯಮಗಳು, 1960ರ ನಿಯಮ 33(ಒ)ರನ್ವಯ 03 ವರ್ಷಗಳ ಕಾಲ ಈ ಸಂಘದ ವಿಶಿಷ್ಟ ದಾಖಲಾತಿಗಳನ್ನು ಸಹಕಾರ ಸಂಘಗಳ ಸಹಾಯಕ ನಿಬಂಧಕರು, ಮಧುಗಿರಿ ಉಪ ವಿಭಾಗ ಇವರ ಕಾರ್ಯಾಲಯದಲ್ಲಿ ಕಾಯ್ದಿರಿಸತಕ್ಕದ್ದು.

ಈ ಆದೇಶವನ್ನು ನನ್ನ ಸ್ವ-ಸಹಿ ಮತ್ತು ಕಛೇರಿ ಮೊಹರಿನೊಂದಿಗೆ ದಿನಾಂಕ: 31-03-2016ರಂದು ನೀಡಿರುತ್ತೇನೆ.

**ಜಿ.ಪ್ರಕಾಶ್**

P.R. 512
SC – 10

ಸಹಕಾರ ಸಂಘಗಳ ಉಪ ನಿಬಂಧಕರು
ತುಮಕೂರು ಜಿಲ್ಲೆ, ತುಮಕೂರು.

## ಸಹಕಾರ ಇಲಾಖೆ

### ಸಹಕಾರ ಸಂಘಗಳ ಉಪ ನಿಬಂಧಕರು, ಮಿನಿ ವಿಧಾನಸೌಧ, ಕೊಠಡಿ ಸಂಖ್ಯೆ. 305, 2ನೇ ಮಹಡಿ, ತುಮಕೂರು ಜಿಲ್ಲೆ, ತುಮಕೂರು ಇವರ ಕಾರ್ಯಾಲಯದ ನಡವಳಿಗಳು

**ವಿಷಯ :** ಸಮಾಪನೆಗೊಂಡಿರುವ ಕಲಿದೇವಪುರ ಸಣ್ಣ ನೀರಾವರಿ ನೀರು ಬಳಕೆದಾರರ ಸಹಕಾರ ಸಂಘ ನಿ., ಕಲಿದೇವಪುರ, ಮಧುಗಿರಿ ತಾಲ್ಲೂಕು ಈ ಸಂಘದ ನೋಂದಣಿ ರದ್ದುಪಡಿಸುವ ಕುರಿತು.

**ಉಲ್ಲೇಖ :**
1) ಸಹಕಾರ ಸಂಘಗಳ ಸಹಾಯಕ ನಿಬಂಧಕರು, ಮಧುಗಿರಿ ಉಪ ವಿಭಾಗ, ಮಧುಗಿರಿರವರ ಪ್ರಸ್ತಾವನೆ ಪತ್ರದ ಸಂಖ್ಯೆ: ಸನಿ33/ನೋಂ.ರ/101/2015-16, ದಿನಾಂಕ: 29-03-2016.
2) ಈ ಕಛೇರಿಯ ಸಮಾಪನಾ ಆದೇಶ ಸಂಖ್ಯೆ: ಡಿಆರ್‌ಟಿ:ಎಲ್‌ಕ್ಯೂಡಿ:ಸಿ.ಆರ್-05/2010-11, ದಿನಾಂಕ: 30-11-2010.
3) ಸಮಾಪನಾಧಿಕಾರಿಗಳ ಪ್ರಸ್ತಾವೆ ದಿನಾಂಕ: 28-03-2016.
4) ದಿನಾಂಕ: 17-03-2016ರ ಜಿಲ್ಲಾ ಮಟ್ಟದ ಪತ್ರಿಕೆಗಳಾದ ಏಕೇಶ್ ಪತ್ರಿಕೆ, ಪ್ರಜಾಯೋಗ ಮತ್ತು ತುಮಕೂರು ವಾರ್ತೆ ದಿನಪತ್ರಿಕೆಯಲ್ಲಿ ಸದರಿ ಸಂಘದ ಸದಸ್ಯರ ಗಮನಕ್ಕೆ ಪ್ರಕಟಿಸಿರುವಂತೆ.

**ಪ್ರಸ್ತಾವನೆ :**

ಸಮಾಪನೆಗೊಂಡಿರುವ ಕಲಿದೇವಪುರ ಸಣ್ಣ ನೀರಾವರಿ ನೀರು ಬಳಕೆದಾರರ ಸಹಕಾರ ಸಂಘ ನಿ., ಕಲಿದೇವಪುರ, ಮಧುಗಿರಿ ತಾಲ್ಲೂಕು ಈ ಸಹಕಾರ ಸಂಘವು ಸಹಕಾರ ಸಂಘಗಳ ಸಹಾಯಕ ನಿಬಂಧಕರು, ಮಧುಗಿರಿ ಉಪ ವಿಭಾಗ, ಮಧುಗಿರಿರವರಿಂದ ನೋಂದಣಿ ಸಂಖ್ಯೆ: ಸ.ನಿ-33/ಆರ್.ಎಸ್.ಆರ್/26490/2000-01, ದಿನಾಂಕ: 29-09-2000ರನ್ವಯ ನೋಂದಣಿಯಾಗಿರುತ್ತದೆ. ಸಂಘದ ಕಾರ್ಯವ್ಯಾಪ್ತಿ ತಾಲ್ಲೂಕು ಮಟ್ಟಕ್ಕಿಂತ ಕಡಿಮೆ ಇರುತ್ತದೆ. ಸದರಿ ಸಂಘವು ತನ್ನ ಉಪನಿಯಮಗಳ ಉದ್ದೇಶಗಳಿಗನುಗುಣವಾಗಿ ಸದಸ್ಯರ ಹಿತಕ್ಕಾಗಿ ಕಾರ್ಯನಿರ್ವಹಿಸದೇ ಸ್ಥಗಿತಗೊಂಡ ಕಾರಣ ಸಂಘವನ್ನು ಸಮಾಪನೆಗೊಳಿಸುವಂತೆ ಮಧುಗಿರಿ ಉಪವಿಭಾಗದ ಸಹಕಾರ ಸಂಘಗಳ ಸಹಾಯಕ ನಿಬಂಧಕರು ಈ ಕಛೇರಿಗೆ ಪ್ರಸ್ತಾವನೆ ಸಲ್ಲಿಸಲಾಗಿದ್ದ ಹಿನ್ನಲೆಯಲ್ಲಿ ಉಲ್ಲೇಖ (2)ರ ಈ ಕಛೇರಿ ಆದೇಶದ ರೀತ್ಯಾ ಸಂಘವನ್ನು ಸಮಾಪನೆಗೊಳಿಸಿ ಸಹಕಾರ ಸಂಘಗಳ ನಿರೀಕ್ಷಕರು, ಮಧುಗಿರಿ ತಾಲ್ಲೂಕು, ಮಧುಗಿರಿ ಇವರನ್ನು ಸಮಾಪನಾಧಿಕಾರಿಯನ್ನಾಗಿ ನೇಮಿಸಲಾಗಿತ್ತು.

ಸಮಾಪನಾಧಿಕಾರಿಗಳು ಸಂಘದ ಪ್ರಭಾರವನ್ನು ಪಡೆದು, ಲೆಕ್ಕಪರಿಶೋಧನಾ ವರದಿ, ಸಂಘದ ಆಸ್ತಿ-ಜವಾಬ್ದಾರಿ ತ:ಖ್ತೆ ರೀತ್ಯಾ ವಿಲೇವಾರಿ ಮಾಡಿರುತ್ತಾರೆ. ಸಮಾಪನಾಧಿಕಾರಿಗಳು ದಿನಾಂಕ: 28-03-2016ರಂದು ನಡೆದ ಅಂತಿಮ ಸಭೆಯಲ್ಲಿ ನಿರ್ಣಯ ಕೈಗೊಂಡು ಅದರಂತೆ, ಆಸ್ತಿ-ಜವಾಬ್ದಾರಿಯನ್ನು ವಿಲೇವಾರಿ ಮಾಡಿರುತ್ತಾರೆ. ದಿನಾಂಕ: 28-03-2016ಕ್ಕೆ ಆಸ್ತಿ ಜವಾಬ್ದಾರಿ ಶೂನ್ಯಗೊಳಿಸಿ ಹಾಗೂ ಸಂಘದ ನೋಂದಣಿ ಕ್ರಮಾಂಕವನ್ನು ರದ್ದುಪಡಿಸಲು ತೀರ್ಮಾನಿಸಿ ಪ್ರಸ್ತಾವೆಯನ್ನು ಸಹಕಾರ ಸಂಘಗಳ ಸಹಾಯಕ ನಿಬಂಧಕರು, ಮಧುಗಿರಿ ಉಪವಿಭಾಗರವರಿಗೆ ಸಲ್ಲಿಸಿದ್ದು, ಉಲ್ಲೇಖ (1)ರ ಪತ್ರದಲ್ಲಿ ಈ ಕಛೇರಿಗೆ ಶಿಫಾರಸ್ಸು ಮಾಡಿರುತ್ತಾರೆ. ಸಹಕಾರ ಸಂಘಗಳ ನಿರೀಕ್ಷಕರು, ಮಧುಗಿರಿ ತಾಲ್ಲೂಕುರವರ ಶಿಫಾರಸ್ಸು ಮತ್ತು ಸಹಕಾರ ಸಂಘಗಳ ಸಹಾಯಕ ನಿಬಂಧಕರು, ಉಪವಿಭಾಗ ಇವರ ಶಿಫಾರಸ್ಸು ಹಾಗೂ ದಿನಾಂಕ: 28-03-2016ರಂದು ನಡೆಸಿದ ಸಮಾಪನಾಧಿಕಾರಿ ಸಭೆಯ ನಡವಳಿಕೆ ಮತ್ತು ಶೂನ್ಯಗೊಳಿಸಿರುವ ಆಸ್ತಿ-ಜವಾಬ್ದಾರಿ ಸಲ್ಲಿಸಿರುವ ಕಾರಣ ಸಂಘವನ್ನು ಮುಂದುವರೆಸುವುದರಿಂದ ಸದಸ್ಯರಿಗಾಗಲೀ ಸಾರ್ವಜನಿಕರಿಗಾಗಲೀ ಯಾವುದೇ ಪ್ರಯೋಜನವಿಲ್ಲವೆಂದು ಮನಗಂಡು ಈ ಸಹಕಾರ ಸಂಘದ ನೋಂದಣಿ ಕ್ರಮಾಂಕವನ್ನು ರದ್ದುಪಡಿಸುವುದು ಸೂಕ್ತವೆಂದು ಪರಿಗಣಿಸಿ ಈ ಕೆಳಕಂಡ ಆದೇಶ ಹೊರಡಿಸಲಾಗಿದೆ.

**: ಆದೇಶ :**

**ಸಂಖ್ಯೆ: ಡಿಆರ್‌ಟಿ:ಎಲ್‌ಕ್ಯೂಡಿ:ಸಿ.ಆರ್-05/2010-11, ದಿನಾಂಕ: 31-03-2016**

ಪ್ರಸ್ತಾವನೆಯಲ್ಲಿ ವಿವರಿಸಿರುವಂತೆ, ಕರ್ನಾಟಕ ಸಹಕಾರ ಸಂಘಗಳ ಕಾಯ್ದೆ, 1959ರ ಕಲಂ 75 ರನ್ವಯ ಹಾಗೂ ಸರ್ಕಾರದ ಅಧಿಸೂಚನೆ ಸಂಖ್ಯೆ: ಸಿಒ/139/ಸಿಎಲ್‌ಎಂ/2010, ದಿನಾಂಕ: 17-02-2011ರನ್ವಯ ದತ್ತವಾಗಿರುವ ಅಧಿಕಾರವನ್ನು ಚಲಾಯಿಸುತ್ತಾ, ಜಿ.ಪ್ರಕಾಶ್, ಸಹಕಾರ ಸಂಘಗಳ ಉಪ ನಿಬಂಧಕರು, ತುಮಕೂರು ಜಿಲ್ಲೆ, ತುಮಕೂರು ಆದ ನಾನು, ಸಮಾಪನೆಯಲ್ಲಿರುವ ಕಲಿದೇವಪುರ ಸಣ್ಣ ನೀರಾವರಿ ನೀರು ಬಳಕೆದಾರರ ಸಹಕಾರ ಸಂಘ ನಿ., ಕಲಿದೇವಪುರ ಈ ಸಹಕಾರ ಸಂಘದ ನೋಂದಣಿ ಸಂಖ್ಯೆ: ಸ.ನಿ-33/ಆರ್.ಎಸ್.ಆರ್/26490/2000-01, ದಿನಾಂಕ: 29-09-2000 ರದ್ದುಪಡಿಸಿ ಕೂಡಲೇ ಜಾರಿಗೆ ಬರುವಂತೆ ಆದೇಶ ಹೊರಡಿಸಲಾಗಿದೆ.

ಈ ಆದೇಶದ ದಿನಾಂಕದಿಂದ ಸಂಘವು ತನ್ನ ಅಸ್ತಿತ್ವವನ್ನು ಕಳೆದುಕೊಂಡು ಪೂರ್ಣವಾಗಿ ವಿಸರ್ಜಿತವಾಗಿದೆ ಎಂದು ಪರಿಗಣಿಸತಕ್ಕದ್ದು. ಈ ಸಹಕಾರ ಸಂಘಕ್ಕೆ ಸಂಬಂಧಿಸಿದ ದಾಖಲಾತಿಗಳನ್ನು ಸಹಕಾರ ಸಂಘಗಳ ನಿಯಮಗಳು, 1960ರ ನಿಯಮ 33(ಒ)ರನ್ವಯ 03 ವರ್ಷಗಳ ಕಾಲ ಈ ಸಂಘದ ವಿಶಿಷ್ಟ ದಾಖಲಾತಿಗಳನ್ನು ಸಹಕಾರ ಸಂಘಗಳ ಸಹಾಯಕ ನಿಬಂಧಕರು, ಮಧುಗಿರಿ ಉಪ ವಿಭಾಗ ಇವರ ಕಾರ್ಯಾಲಯದಲ್ಲಿ ಕಾಯ್ದಿರಿಸತಕ್ಕದ್ದು.

ಈ ಆದೇಶವನ್ನು ನನ್ನ ಸ್ವ-ಸಹಿ ಮತ್ತು ಕಛೇರಿ ಮೊಹರಿನೊಂದಿಗೆ ದಿನಾಂಕ: 31-03-2016ರಂದು ನೀಡಿರುತ್ತೇನೆ.

**ಜಿ.ಪ್ರಕಾಶ್**

P.R. 513
SC – 10

ಸಹಕಾರ ಸಂಘಗಳ ಉಪ ನಿಬಂಧಕರು
ತುಮಕೂರು ಜಿಲ್ಲೆ, ತುಮಕೂರು.

## ಲೋಕೋಪಯೋಗಿ, ಬಂದರು ಮತ್ತು ಒಳನಾಡು ಜಲಸಾರಿಗೆ ಸಚಿವಾಲಯ

**ಸಂಖ್ಯೆ : ಲೋಇ 67 ಬನೌಸೇ 2013 ಬೆಂಗಳೂರು, ದಿನಾಂಕ: 31.01.2015**

**ಅಧಿಸೂಚನೆ**

**ವಿಷಯ :–** ಕರ್ನಾಟಕ ಸಾರ್ವಜನಿಕ ಉದ್ಯೋಗ (ಹೈದರಾಬಾದ್–ಕರ್ನಾಟಕ ಪ್ರದೇಶಕ್ಕೆ ನೇಮಕಾತಿಯಲ್ಲಿ ಮೀಸಲಾತಿ) ಆದೇಶ 2013 ರಡಿಯಲ್ಲಿ ಬಂದರು ಮತ್ತು ಒಳನಾಡು ಜಲಸಾರಿಗೆ ಇಲಾಖೆಯ ವಿವಿಧ ವೃಂದಗಳಲ್ಲಿ ಹೈದರಾಬಾದ್–ಕರ್ನಾಟಕ ಪ್ರದೇಶದವರಿಗಾಗಿ ನಿಗಧಿಪಡಿಸಲಾಗಿರುವ ಶೇಕಡಾವಾರು ಪ್ರಮಾಣದ ಹುದ್ದೆಗಳನ್ನು ಗುರುತಿಸುವ ಕುರಿತು.

ಭಾರತೀಯ ಸಂವಿಧಾನದ ಅನುಚ್ಛೇಧ 371(ಜೆ)ಯ ಅನುಷ್ಠಾನಕ್ಕೆ ಸಂಬಂಧಿಸಿದಂತೆ ಹೊರಡಿಸಿರುವ ಕರ್ನಾಟಕ–ಸಾರ್ವಜನಿಕ ಉದ್ಯೋಗ (ಹೈದರಾಬಾದ್–ಕರ್ನಾಟಕ ಪ್ರದೇಶಕ್ಕೆ ನೇಮಕಾತಿಯಲ್ಲಿ ಮೀಸಲಾತಿ) ಆದೇಶ, 2013 ರ ಕಂಡಿಕೆ 13 ರ ಅನ್ವಯ ನಿರ್ದೇಶಕರು, ಬಂದರು ಮತ್ತು ಒಳನಾಡು ಜಲಸಾರಿಗೆ ಇಲಾಖೆ ಈ ಕಛೇರಿಯನ್ನು ರಾಜ್ಯ ಮಟ್ಟದ ಕಛೇರಿಯೆಂದು ಗುರುತಿಸಲಾಗಿದ್ದು, ಸದರಿ ಕಛೇರಿಯ ಸೇವೆಯಲ್ಲಿನ ಹುದ್ದೆಗಳಲ್ಲಿ ಮತ್ತು ಹೈದರಾಬಾದ್–ಕರ್ನಾಟಕ ಪ್ರದೇಶದ ವ್ಯಾಪ್ತಿಯಲ್ಲಿ ಬರುವ ಸದರಿ ಕಛೇರಿಗಳಲ್ಲಿನ ಸೇವೆಯಲ್ಲಿನ ಹುದ್ದೆಗಳಲ್ಲಿ ಮತ್ತು ಹೈದರಾಬಾದ್–ಕರ್ನಾಟಕ ಪ್ರದೇಶದ ವ್ಯಾಪ್ತಿಯಲ್ಲಿ ಬರುವ ಬಂದರು ಮತ್ತು ಒಳನಾಡು ಜಲಸಾರಿಗೆ ಇಲಾಖೆಯ ಸೇವೆಯಲ್ಲಿನ ಹುದ್ದೆಗಳಲ್ಲಿ ಹೈದರಾಬಾದ್–ಕರ್ನಾಟಕ ಪ್ರದೇಶ ವ್ಯಾಪ್ತಿಯ ಸ್ಥಳೀಯ ವ್ಯಕ್ತಿಗಳಿಗೆ ರಾಜ್ಯ ಮಟ್ಟದ ಸ್ಥಳೀಯ ವೃಂದ ಮತ್ತು ಪ್ರಾದೇಶಿಕ ಸ್ಥಳೀಯ ವೃಂದಗಳನ್ನು ರಚಿಸಿ ನಿಗಧಿಪಡಿಸಲಾದ ಶೇಕಡವಾರು ಹುದ್ದೆಗಳನ್ನು ಕೆಳಕಂಡಂತೆ ವೃಂದವಾರು ಮೀಸಲಿರಿಸಿ ಅನುಸೂಚಿಗಳಲ್ಲಿರುವಂತೆ ಈ ಮೂಲಕ ಅಧಿಸೂಚಿಸಲಾಗಿದೆ.

**ಅನುಸೂಚಿ–I**

**ನಿರ್ದೇಶಕರು, ಬಂದರು ಮತ್ತು ಒಳನಾಡು ಜಲಸಾರಿಗೆ ಇಲಾಖೆ, ಕೇಂದ್ರ ಕಛೇರಿ, ಕಾರವಾರ.**

| ಕ್ರ. ಸಂ. | ಹುದ್ದೆ | ವೇತನ ಶ್ರೇಣಿ (₹. ಗಳಲ್ಲಿ) | ಮಂಜೂರಾದ ವೃಂದ ಬಲ | ಮಂಜೂರಾದ ವೃಂದ ಬಲದಲ್ಲಿ | | | ರಾಜ್ಯ ಮಟ್ಟದ ಸ್ಥಳೀಯ ವೃಂದದಲ್ಲಿ ಹೈದರಾಬಾದ್–ಕರ್ನಾಟಕ ಪ್ರದೇಶದವರಿಗಾಗಿ ಗುರುತಿಸಲಾದ ಶೇ 8% ರಷ್ಟು ಹುದ್ದೆಗಳು | | | ರಾಜ್ಯ ಮಟ್ಟದ ಸ್ಥಳೀಯವಲ್ಲದ ವೃಂದದಲ್ಲಿ ಗುರುತಿಸಲಾದ ಹುದ್ದೆಗಳು | | | |
|---|---|---|---|---|---|---|---|---|---|---|---|---|---|
| | | | | ನೇರ ನೇಮಕಾತಿ | ಮುಂಬಡ್ತಿ | ನಿಯೋಜನೆ | ನೇರ ನೇಮಕಾತಿ | ಮುಂಬಡ್ತಿ | ನಿಯೋಜನೆ | ನೇರ ನೇಮಕಾತಿ | ಮುಂಬಡ್ತಿ | ನಿಯೋಜನೆ | ಒಟ್ಟು |
| 1 | 2 | 3 | 4 | 5 | 6 | 7 | 8 | 9 | 10 | 11 | 12 | 13 | 14 |
| **ಗ್ರೂಪ್ – "ಎ" ವೃಂದ – (8% ಮೀಸಲಾತಿ)** | | | | | | | | | | | | | |
| 1 | ನಿರ್ದೇಶಕರು | 52500–73000 | 1 | – | 100% | – | – | – | – | – | 1 | – | 1 |
| | | | | – | 1 | – | | | | | | | |
| 2 | ಬಂದರು ಅಧಿಕಾರಿ / ಉಪ ನಿರ್ದೇಶಕರು | 36300–53850 | 1 | 100% | – | – | – | – | – | 1 | – | – | 1 |
| | | | | 1 | | | | | | | | | |
| 3 | ಬಂದರು ಇಂಜಿನೀಯರ್ | 36300–53850 | 1 | – | 100% | – | – | – | – | – | 1 | – | 1 |
| | | | | – | 1 | – | | | | | | | |
| 4 | ಜಲಮೋಜಣಿದಾರರು | 28100–50100 | 1 | – | 100% | – | – | – | – | – | 1 | – | 1 |
| | | | | – | 1 | – | | | | | | | |

| ಗ್ರೂಪ್ – "ಬಿ" ವೃಂದ – (8% ಮೀಸಲಾತಿ) | | | | | | | | | | | | | |
|---|---|---|---|---|---|---|---|---|---|---|---|---|---|
| | | | | | | | | | | | | | |
| 1 | ಸಹಾಯಕ ಜಲಮೋಜಣೀದಾರರು | 24000–45300 | 1 | – | 100% | – | – | – | – | – | 1 | – | 1 |
| | | | | – | 1 | – | | | | | | | |
| 2 | ಉಪ ಇಂಜಿನೀಯರ್ (ಯಾಂತ್ರಿಕ) | 22800–43200 | 1 | – | 100% | – | – | – | – | – | 1 | – | 1 |
| | | | | – | 1 | – | | | | | | | |
| 3 | ಕಿರಿಯ ಇಂಜಿನೀಯರ್.(ವಿ.ದ) | 22800–43200 | 3 | – | 100% | – | – | 1 | – | – | 2 | – | 2 |
| | | | | – | 3 | – | | | | | | | |
| 4 | ಆಡಳಿತ ಸಹಾಯಕ / ಕಡವು ಅಧಿಕಾರಿ | 21600–40050 | 2 | – | 100% | – | – | **1** | – | – | 1 | – | 1 |
| | | | | – | 2 | – | | | | | | | |
| 5 | ಕಿರಿಯ ಜಲಮೋಜಣಿದಾರರು | 21600–40050 | 2 | 100% | – | – | 1 | – | – | 1 | – | – | 1 |
| | | | | 2 | – | – | | | | | | | |

ಗ್ರೂಪ್ – "ಸಿ" ವೃಂದ – (8% ಮೀಸಲಾತಿ)

| ಕ್ರ. ಸಂ. | ಹುದ್ದೆ | ವೇತನ ಶ್ರೇಣಿ (₹. ಗಳಲ್ಲಿ) | ಮಂಜೂರಾದ ವೃಂದ ಬಲ | ಮಂಜೂರಾದ ವೃಂದ ಬಲದಲ್ಲಿ | | | ರಾಜ್ಯ ಮಟ್ಟದ ಸ್ಥಳೀಯ ವೃಂದದಲ್ಲಿ ಹೈದರಾಬಾದ್ ಕರ್ನಾಟಕ ಪ್ರದೇಶದವರಿಗಾಗಿ ಗುರುತಿಸಲಾದ ಶೇ 8% ರಷ್ಟು ಹುದ್ದೆಗಳು | | | ರಾಜ್ಯ ಮಟ್ಟದ ಸ್ಥಳೀಯವಲ್ಲದ ವೃಂದದಲ್ಲಿ ಗುರುತಿಸಲಾದ ಹುದ್ದೆಗಳು | | | |
|---|---|---|---|---|---|---|---|---|---|---|---|---|---|
| | | | | ನೇರ ನೇಮಕಾತಿ | ಮುಂಬಡ್ತಿ | ನಿಯೋಜನೆ | ನೇರ ನೇಮಕಾತಿ | ಮುಂಬಡ್ತಿ | ನಿಯೋಜನೆ | ನೇರ ನೇಮಕಾತಿ | ಮುಂಬಡ್ತಿ | ನಿಯೋಜನೆ | ಒಟ್ಟು |
| **1** | **2** | **3** | **4** | **5** | **6** | **7** | **8** | **9** | **10** | **11** | **12** | **13** | **14** |
| 1 | ಬಂದರು ಸಂರಕ್ಷಕರು | 20000–36300 | 1 | – | 100% | | – | – | – | – | 1 | – | 1 |
| | | | | – | 1 | – | | | | | | | |
| 2 | ಕಛೇರಿ ಅಧೀಕ್ಷಕರು | 20000–36300 | 2 | – | 100% | – | – | 1 | – | – | 1 | – | 1 |
| | | | | – | 2 | – | | | | | | | |
| 3 | ನಕ್ಷೆಗಾರ | 17650–32000 | 2 | 100% | – | – | 1 | – | – | 1 | – | – | 1 |
| | | | | 2 | – | – | | | | | | | |
| 4 | ಕಿರಿಯ ಇಂಜಿನೀಯರ್ (ಇಲೆಕ್ಟ್ರೀಕಲ್) | 17650–32000 | 1 | – | 100% | – | – | – | – | – | 1 | – | 1 |
| | | | | – | 1 | – | | | | | | | |

| ಕ್ರ. ಸಂ. | ಹುದ್ದೆ | ವೇತನ ಶ್ರೇಣಿ (₹. ಗಳಲ್ಲಿ) | ಮಂಜೂರಾದ ವೃಂದ ಬಲ | ಮಂಜೂರಾದ ವೃಂದ ಬಲದಲ್ಲಿ | | | ರಾಜ್ಯ ಮಟ್ಟದ ಸ್ಥಳೀಯ ವೃಂದದಲ್ಲಿ ಹೈದರಾಬಾದ್ ಕರ್ನಾಟಕ ಪ್ರದೇಶದವರಿಗಾಗಿ ಗುರುತಿಸಲಾದ ಶೇ 8% ರಷ್ಟು ಹುದ್ದೆಗಳು | | | ರಾಜ್ಯ ಮಟ್ಟದ ಸ್ಥಳೀಯವಲ್ಲದ ವೃಂದದಲ್ಲಿ ಗುರುತಿಸಲಾದ ಹುದ್ದೆಗಳು | | | |
|---|---|---|---|---|---|---|---|---|---|---|---|---|---|
| | | | | ನೇರ ನೇಮಕಾತಿ | ಮುಂಬಡ್ತಿ | ನಿಯೋಜನೆ | ನೇರ ನೇಮಕಾತಿ | ಮುಂಬಡ್ತಿ | ನಿಯೋಜನೆ | ನೇರ ನೇಮಕಾತಿ | ಮುಂಬಡ್ತಿ | ನಿಯೋಜನೆ | ಒಟ್ಟು |
| **1** | **2** | **3** | **4** | **5** | **6** | **7** | **8** | **9** | **10** | **11** | **12** | **13** | **14** |
| 5 | ಸೂಪರವೈಸರ್ (ಮೆಕ್ಯಾನಿಕಲ್) | 17650–32000 | 4 | 100%<br>4 | | –<br>– | 1 | – | – | 3 | – | – | 3 |
| 6 | ಫೋರಮೆನ್ | 17650–32000 | 1 | –<br>– | 100%<br>1 | –<br>– | – | – | – | – | 1 | – | 1 |
| 7 | ಉಪ ಬಂದರು ಸಂರಕ್ಷಕ | 16000–29600 | 5 | –<br>– | 100%<br>5 | –<br>– | – | 1 | – | – | 4 | – | 4 |
| 8 | ಶೀಘ್ರಲಿಪಿಗಾರ | 14550–26700 | 4 | –<br>– | 100%<br>4 | –<br>– | – | 1 | – | – | 3 | – | 03 |
| 9 | ಪ್ರಥಮ ದರ್ಜೆ ಸಹಾಯಕ | 14550–26700 | 6 | 25%<br>1 | 75%<br>5 | –<br>– | – | 1 | – | 1 | 4 | – | 05 |
| 10 | ಹಿರಿಯ ಬೆರಳಚ್ಚುಗಾರ | 14550–26700 | 1 | –<br>– | 100%<br>1 | –<br>– | – | – | – | – | 1 | – | 01 |
| 11 | ಇಲೆಕ್ಟ್ರೀಶಿಯನ್ | 12500–24000 | 1 | –<br>– | 100%<br>1 | –<br>– | – | – | – | – | 1 | – | 01 |
| 12 | ಫಿಟ್ಟರ್ | 12500–24000 | 1 | 100%<br>1 | –<br>– | –<br>– | – | – | – | 1 | – | – | 01 |

| ಕ್ರ. ಸಂ. | ಹುದ್ದೆ | ವೇತನ ಶ್ರೇಣಿ (₹. ಗಳಲ್ಲಿ) | ಮಂಜೂರಾದ ವೃಂದ ಬಲ | ಮಂಜೂರಾದ ವೃಂದ ಬಲದಲ್ಲಿ | | | ರಾಜ್ಯ ಮಟ್ಟದ ಸ್ಥಳೀಯ ವೃಂದದಲ್ಲಿ ಹೈದರಾಬಾದ್ ಕರ್ನಾಟಕ ಪ್ರದೇಶದವರಿಗಾಗಿ ಗುರುತಿಸಲಾದ ಶೇ 8% ರಷ್ಟು ಹುದ್ದೆಗಳು | | | ರಾಜ್ಯ ಮಟ್ಟದ ಸ್ಥಳೀಯವಲ್ಲದ ವೃಂದದಲ್ಲಿ ಗುರುತಿಸಲಾದ ಹುದ್ದೆಗಳು | | | |
|---|---|---|---|---|---|---|---|---|---|---|---|---|---|
| | | | | ನೇರ ನೇಮಕಾತಿ | ಮುಂಬಡ್ತಿ | ನಿಯೋಜನೆ | ನೇರ ನೇಮಕಾತಿ | ಮುಂಬಡ್ತಿ | ನಿಯೋಜನೆ | ನೇರ ನೇಮಕಾತಿ | ಮುಂಬಡ್ತಿ | ನಿಯೋಜನೆ | ಒಟ್ಟು |
| **1** | **2** | **3** | **4** | **5** | **6** | **7** | **8** | **9** | **10** | **11** | **12** | **13** | **14** |
| 13 | ಸಹಾಯಕ ಬಂದರು ಸಂರಕ್ಷಕ | 12500–24000 | 11 | 50% | 50% | – | – | 1 | – | 5 | 5 | – | 10 |
| | | | | 5 | 6 | – | | | | | | | |
| 14 | ಟೈಡ್‌ವಾಚರ್ | 11600–21000 | 2 | 50% | 50% | – | 1 | – | – | – | 1 | – | 01 |
| | | | | 1 | 1 | – | | | | | | | |
| 15 | ಬೆರಳಚ್ಚುಗಾರ | 11600–21000 | 6 | 100% | – | – | 1 | – | – | 5 | – | – | 05 |
| | | | | 6 | – | – | | | | | | | |
| 16 | ದ್ವಿತೀಯ ದರ್ಜೆ ಸಹಾಯಕ. | 11600–21000 | 8 | 67% | 33% | – | 1 | – | – | 4 | 3 | – | 07 |
| | | | | 5 | 3 | – | | | | | | | |
| 17 | ಚಾಲಕ(ವಾಹನ) | 11600–21000 | 4 | – | 100% | – | – | 1 | – | – | 3 | – | 03 |
| | | | | – | 4 | – | | | | | | | |

**ಗ್ರೂಪ್ – "ಡಿ" ವೃಂದ – (8% ಮೀಸಲಾತಿ)**

| 1 | 2 | 3 | 4 | 5 | 6 | 7 | 8 | 9 | 10 | 11 | 12 | 13 | 14 |
|---|---|---|---|---|---|---|---|---|---|---|---|---|---|
| 1 | ಅಟೆಂಡರ್ಸ್ | 10400–16400 | 3 | 100% | – | – | 1 | – | – | 2 | – | – | 2 |
| | | | | 3 | – | –– | | | | | | | |
| 2 | ನಾವಿಕ/ಲಾಸ್ಕರ್ | 10400–16400 | 13 | 100% | – | – | 2 | – | – | 11 | – | – | 11 |
| | | | | 13 | – | – | | | | | | | |
| 3 | ಸಿಪಾಯಿ | 9600–14550 | 3 | 100% | – | – | 1 | – | – | 2 | – | – | 2 |
| | | | | 3 | – | – | | | | | | | |

**ಗಂಗಪ್ಪ ಎಂ.**
ಸರ್ಕಾರದ ಅಧೀನ ಕಾರ್ಯದರ್ಶಿ,
ಲೋಕೋಪಯೋಗಿ, ಬಂದರು ಮತ್ತು ಒಳನಾಡು
ಜಲಸಾರಿಗೆ ಇಲಾಖೆ (ಬಂದರುಗಳು).

## ಅನುಸೂಚಿ–II

## ಹೈದರಾಬಾದ್ – ಕರ್ನಾಟಕ ಪ್ರದೇಶದ ಜಿಲ್ಲಾವಾರು ಪ್ರಾದೇಶಿಕ ಸ್ಥಳೀಯ ವೃಂದದ ಗ್ರೂಪ್– “ಸಿ” ಮತ್ತು “ಡಿ” ಹುದ್ದೆಗಳು

### 1. ಕಲಬುರಗಿ ಜಿಲ್ಲೆ

| ಕ್ರ. ಸಂ. | ಹುದ್ದೆ | ವೇತನ ಶ್ರೇಣಿ (ರೂ. ಗಳಲ್ಲಿ) | ಮಂಜೂ–ರಾದ ವೃಂದ ಬಲ | ಮಂಜೂರಾದ ವೃಂದ ಬಲದಲ್ಲಿ | | | ಸ್ಥಳೀಯ ವೃಂದದಲ್ಲಿ ಹೈದರಾಬಾದ್ – ಕರ್ನಾಟಕ ಪ್ರದೇಶದವರಿಗಾಗಿ ಗುರುತಿಸಲಾದ ಹುದ್ದೆಗಳು | | | ಪ್ರಾದೇಶಿಕ ಸ್ಥಳೀಯವಲ್ಲದ ವೃಂದದ ಹುದ್ದೆಗಳು (ಉಳಿದ ಮೂಲ ವೃಂದ) | | | |
|---|---|---|---|---|---|---|---|---|---|---|---|---|---|
| | | | | ನೇರ ನೇಮಕಾತಿ | ಮುಂಬಡ್ತಿ | ನಿಯೋಜನೆ | ನೇರ ನೇಮಕಾತಿ | ಮುಂಬಡ್ತಿ | ನಿಯೋಜನೆ | ನೇರ ನೇಮಕಾತಿ | ಮುಂಬಡ್ತಿ | ನಿಯೋಜನೆ | ಒಟ್ಟು |
| 1 | 2 | 3 | 4 | 5 | 6 | 7 | 8 | 9 | 10 | 11 | 12 | 13 | 14 |
| ಗ್ರೂಪ್ – “ಸಿ” ವೃಂದ – (80% ಮೀಸಲಾತಿ) | | | | | | | | | | | | | |
| 1 | ಕಡವು ನಿರೀಕ್ಷಕ | 20000–36300 | 1 | – | 100% | – | – | – | – | – | 1 | – | 1 |
| | | | | – | 1 | – | | | | | | | |
| 2 | ಉಪ ಕಡವು ನಿರೀಕ್ಷಕ | 16000–29600 | 1 | – | 100% | – | – | – | – | – | 1 | – | 1 |
| | | | | – | 1 | – | | | | | | | |
| 3 | ಸಹಾಯಕ ಕಡವು ನಿರೀಕ್ಷಕ | 12500–24000 | 1 | – | 75% | – | – | – | – | – | 1 | – | 1 |
| | | | | – | 1 | – | | | | | | | |
| 4 | ಚಾಲಕ ದರ್ಜೆ –III | 11600–21000 | 2 | – | 100% | – | – | 1 | – | – | 1 | – | 1 |
| | | | | – | 2 | – | | | | | | | |
| 5 | ಸಾರಂಗ ದರ್ಜೆ–III | 11600–21000 | 2 | – | 100% | – | – | 1 | – | – | 1 | – | 1 |
| | | | | – | 2 | – | | | | | | | |
| ಗ್ರೂಪ್ – “ಡಿ” ವೃಂದ – (85% ಮೀಸಲಾತಿ) | | | | | | | | | | | | | |
| 1 | ಹಾಸಲು ವಸೂಲ್ದಾರ | 10400–16400 | 2 | 100% | – | – | 1 | – | – | 1 | – | – | 1 |
| | | | | 2 | – | – | | | | | | | |
| 2 | ಲಾಸ್ಕರ | 10400–16400 | 2 | 100% | – | – | 1 | – | – | 1 | – | – | 1 |
| | | | | 2 | – | – | | | | | | | |

